(ii) ಸಂಸ್ಥೆಯಿಂದ ಅಥವಾ ವಿದ್ಯಾರ್ಥಿನಿಲಯದಿಂದ ತಾತ್ಕಾಲಿಕವಾಗಿ ಹೊರಹಾಕುವ ಶಿಕ್ಷೆಯನ್ನು, ಸಂಬಂಧಪಟ್ಟ ಸಂಸ್ಥೆಯ ಅಥವಾ ವಿದ್ಯಾರ್ಥಿನಿಲಯದ ಮುಖ್ಯಸ್ಥರು ವಿಧಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಯಾವುದೇ ನಿರ್ಣಯವನ್ನು, ಯಾವೊಬ್ಬ ಸದಸ್ಯರಿಗೆ ನೋಟೀಸನ್ನು ಜಾರಿ ಮಾಡುವಲ್ಲಿಯ ಯಾವುದೇ ಅಕ್ರಮತೆಯ ಕಾರಣದಿಂದಾಗಿ ಅಸಿಂಧುವೆಂದು ಭಾವಿಸತಕ್ಕದ್ದಲ್ಲ:

ಪರಂತು, ಅಂಥ ಪ್ರಾಧಿಕಾರದ ಅಥವಾ ನಿಕಾಯದ ನಡವಳಿಗಳು, ಅಂಥ ಅಕ್ರಮತೆಯಿಂದ ಪ್ರತಿಕೂಲವಾಗಿ, ಬಾಧಕವಾಗತಕ್ಕದ್ದಲ್ಲ.

**62. ಈ ಅಧಿನಿಯಮವು ಇತರ ಅಧಿನಿಯಮಗಳ ಮೇಲೆ ಹೆಚ್ಚಿನ ಪ್ರಭಾರವುಳ್ಳದ್ದಾಗಿರುವುದು.–**ಈ ಅಧಿನಿಯಮವು ಮತ್ತು ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳು ಅಥವಾ ವಿನಿಯಮಗಳು ಅಥವಾ ನಿಯಮಗಳು ಅಥವಾ ಆರ್ಡಿನೆನ್ಸ್‌ಗಳು, ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಯಾವುದೇ ಸಂಸ್ಥೆಯ ಸಂಬಂಧದಲ್ಲಿ, ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಲ್ಲಿ ನಮೂದು ಮಾಡಿದ ವಿಷಯಗಳ ಸಂಬಂಧದಲ್ಲಿ ಯಾವುದೇ ಇತರ ಅಧಿನಿಯಮದಲ್ಲಿ ಇದಕ್ಕೆ ಅಸಂಗತವಾದುದೇನೇ ಒಳಗೊಂಡಿದ್ದರೂ ಪರಿಣಾಮವುಳ್ಳವುಗಳಾಗಿರತಕ್ಕದ್ದು.

**63. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮದ ಮತ್ತು ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳು, ಆರ್ಡಿನೆನ್ಸ್‌ಗಳು, ವಿನಿಮಯಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ಇರತಕ್ಕದ್ದಲ್ಲ ಮತ್ತು ಅದರಿಂದ ಯಾವುದೇ ಹಾನಿಗಳನ್ನು ಕ್ಲೇಮು ಮಾಡತಕ್ಕದ್ದಲ್ಲ.

**64. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ವ್ಯವಹರಣೆಗಳು ಖಾಲಿಸ್ಥಾನಗಳು ಇರುವುದರಿಂದಾಗಿ ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು, ಯಾವುದೇ ಖಾಲಿಸ್ಥಾನ ಇದೆ ಎಂಬ ಅಥವಾ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ರಚನೆಯಲ್ಲಿಯ ಅಥವಾ ಸದಸ್ಯರ ನೇಮಕಾತಿಯಲ್ಲಿಯ ಯಾವುದೇ ದೋಷ ಅಥವಾ ಅಕ್ರಮತೆಯ ಅಥವಾ ಪ್ರಕರಣದ ಗುಣಗಳಿಗೆ ಬಾಧಕವಾಗದ, ಅಂಥ ಕೃತ್ಯ ಅಥವಾ ವ್ಯವಹರಣೆಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಕಾರಣ ಮಾತ್ರದಿಂದಲೇ ಅಸಿಂಧುವಾಗತಕ್ಕದ್ದಲ್ಲ.

**65. ವಿಶ್ವವಿದ್ಯಾಲಯದ ಸದಸ್ಯತ್ವದಿಂದ ತೆಗೆದುಹಾಕುವುದು.–** (1) ಸಿಂಡಿಕೇಟ್, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅಂಥ ವ್ಯಕ್ತಿಯು, ಸಿಂಡಿಕೇಟ್‌ನ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಸಿದ್ಧದೋಷಿಯಾಗಿದ್ದರೆ ಅಥವಾ ಗುರುತರ ದುರ್ವರ್ತನೆಯ ದೋಷಿಯಾಗಿದ್ದರೆ, ಸಿಂಡಿಕೇಟ್‌ನ ಒಟ್ಟು ಸದಸ್ಯರ ಬಹುಮತದಿಂದ ಮತ್ತು ಸಭೆಯಲ್ಲಿ ಹಾಜರಿದ್ದು ಮತ ನೀಡುವ ಸಿಂಡಿಕೇಟ್‌ನ ಮೂರನೇ ಎರಡರಷ್ಟು ಸಂಖ್ಯೆಯ ಸದಸ್ಯರಿಗಿಂತ ಕಡಿಮೆಯಿಲ್ಲದ ಬಹುಮತದಿಂದ ಒಂದು ನಿರ್ಣಯವನ್ನು ಅಂಗೀಕರಿಸಿ ಆ ಬಗ್ಗೆ ಲಿಖಿತದಲ್ಲಿ ಆದೇಶವನ್ನು ಹೊರಡಿಸುವ ಮೂಲಕ ತೆಗೆದುಹಾಕಬಹುದು ಮತ್ತು ಅದೇ ಕಾರಣಕ್ಕಾಗಿ ಸಿಂಡಿಕೇಟ್, ವಿಶ್ವವಿದ್ಯಾಲಯವು ಆ ವ್ಯಕ್ತಿಗೆ ಪ್ರದಾನ ಮಾಡಿರುವ ಅಥವಾ ನೀಡಿರುವ ಯಾವುದೇ ಪದವಿ ಅಥವಾ ಡಿಪ್ಲೊಮಾವನ್ನು ಹಿಂತೆಗೆದುಕೊಳ್ಳಬಹುದು.

(2) ಸಿಂಡಿಕೇಟ್, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅವನು ಅಸ್ವಸ್ಥಚಿತ್ತದವನಾದರೆ ಅಥವಾ ದಿವಾಳಿಯೆಂದು ನ್ಯಾಯ ನಿರ್ಣಯಿಸಬೇಕೆಂದು ಅರ್ಜಿ ಸಲ್ಲಿಸಿದ್ದರೆ ಅಥವಾ ಹಾಗೆಂದು ನ್ಯಾಯ ನಿರ್ಣೀತರಾಗಿದ್ದರೆ, ಆ ಬಗ್ಗೆ ಹೊರಡಿಸಲಾದ ಲಿಖಿತ ಆದೇಶದ ಮೂಲಕ ತೆಗೆದುಹಾಕಬಹುದು.

(3) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವರಿಗೆ ಒಂದು ಯುಕ್ತ ಅವಕಾಶವನ್ನು ನೀಡದ ಹೊರತು, ಅವರ ಮೇಲೆ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(4) (1)ನೇ ಉಪಪ್ರಕರಣದ ಅಥವಾ ಸಂದರ್ಭಾನುಸಾರ (2)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶದ ಒಂದು ಪ್ರತಿಯನ್ನು, ಅದನ್ನು ಹಾಗೆ ಹೊರಡಿಸಿದ ತರುವಾಯ, ಸಾಧ್ಯವಾದಷ್ಟು ಬೇಗನೆ, ನಿಯಮಿಸಲಾದ ರೀತಿಯಲ್ಲಿ ಸಂಬಂಧಪಟ್ಟ ವ್ಯಕ್ತಿಗೆ ಕಳುಹಿಸತಕ್ಕದ್ದು.

**66. ವಿಶ್ವವಿದ್ಯಾಲಯದೊಡನೆ ಮನ್ನಣೆ ಪಡೆದ ಸಂಸ್ಥೆಗಳ ಸಂಬಂಧ.–** ವಿಶ್ವವಿದ್ಯಾಲಯದೊಡನೆ ಮನ್ನಣೆ ಪಡೆದ ಸಂಸ್ಥೆಗಳ ಸಂಬಂಧವು, ಈ ಸಂಬಂಧದಲ್ಲಿ ರಚಿಸಲಾಗುವ ಪರಿನಿಯಮಗಳಿಗೆ ಒಳಪಟ್ಟಿರತಕ್ಕದ್ದು ಮತ್ತು ಅಂಥ ಪರಿನಿಯಮಗಳು, ವಿಶೇಷವಾಗಿ, ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಸಂಸ್ಥೆಗಳ ಸಂಬಂಧದಲ್ಲಿ ಗ್ರಂಥಾಲಯಗಳು, ಪ್ರಯೋಗ ಶಾಲೆಗಳು ಮತ್ತು ಬೋಧನೆ ಮತ್ತು ಸಂಶೋಧನೆಗಾಗಿ ಇತರ ಸಲಕರಣೆಗಳ ಸಂಬಂಧದಲ್ಲಿ ಅಂಥ ಸಂಸ್ಥೆಗಳು ಒದಗಿಸಿದ ಸೌಲಭ್ಯಗಳು ಮತ್ತು ಆ ಬಗ್ಗೆ ವಹಿಸಿದ ವೆಚ್ಚದ ಸಂಬಂಧದಲ್ಲಿ ಸಮನ್ವಯ ಮತ್ತು ನಿಯಂತ್ರಣ ಮಾಡಲು ಅಧಿಕಾರಗಳನ್ನು ವಿಶ್ವವಿದ್ಯಾಲಯವು ಚಲಾಯಿಸತಕ್ಕದ್ದು.

**67. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ರಚನೆಗೆ ಸಂಬಂಧಪಟ್ಟ ವಿವಾದಗಳು.–** ಯಾವೊಬ್ಬ ವ್ಯಕ್ತಿಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ಇತರ ನಿಕಾಯದ ಸದಸ್ಯನಾಗಿ ಯಥೋಚಿತವಾಗಿ ನಾಮನಿರ್ದೇಶಿತ ನಾಗಿದ್ದಾನೆಯೇ ಅಥವಾ ಸದಸ್ಯನಾಗಿರಲು ಹಕ್ಕುಳ್ಳವರಾಗಿದ್ದಾನೆಯೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಪ್ರಶ್ನೆಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**68. ಸಮಿತಿಗಳ ರಚನೆ.–** ವಿಶ್ವವಿದ್ಯಾಲಯದ ಎಲ್ಲ ಪ್ರಾಧಿಕಾರಗಳು, ಸಮಿತಿಗಳನ್ನು ರಚಿಸಲು ಅಥವಾ ಪುನರ್‌ರಚಿಸಲು ಮತ್ತು ಅವು ಉಚಿತವೆಂದು ಭಾವಿಸುವ ತಮ್ಮ ಅಂಥ ಅಧಿಕಾರಗಳನ್ನು ಅವುಗಳಿಗೆ ಪ್ರತ್ಯಾಯೋಜಿಸಲು ಅಧಿಕಾರ ಹೊಂದಿರತಕ್ಕದ್ದು. ಅಂಥ ಸಮಿತಿಗಳು, ಅನ್ಯಥಾ ಉಪಬಂಧಿಸಿರುವುದನ್ನುಳಿದು, ಸಂಬಂಧಪಟ್ಟ ಪ್ರಾಧಿಕಾರದ ಸದಸ್ಯರನ್ನು ಮತ್ತು ಪ್ರಾಧಿಕಾರವು ಪ್ರತಿಯೊಂದು ಸಂದರ್ಭದಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಇತರ ವ್ಯಕ್ತಿಗಳು ಯಾರಾದರೂ ಇದ್ದರೆ, ಅವರನ್ನು ಒಳಗೊಂಡಿರತಕ್ಕದ್ದು.

**69. ಮಾಹಿತಿಗಳನ್ನು ಪಡೆಯಲು ಅಧಿಕಾರ.–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ಯಾವುದೇ ಮಾಹಿತಿಯನ್ನು ವಿಶ್ವವಿದ್ಯಾಲಯದಿಂದ ಲಿಖಿತ ಆದೇಶದ ಮೂಲಕ ತರಿಸಿಕೊಳ್ಳಬಹುದು ಮತ್ತು ವಿಶ್ವವಿದ್ಯಾಲಯವು, ಅಂಥ ಮಾಹಿತಿಯು ಲಭ್ಯವಿದ್ದಲ್ಲಿ ಯುಕ್ತ ಅವಧಿಯೊಳಗೆ ಅಂಥ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ರಹಸ್ಯವೆಂದು ಪರಿಗಣಿಸುವ ಮಾಹಿತಿಯ ಸಂದರ್ಭದಲ್ಲಿ, ವಿಶ್ವವಿದ್ಯಾಲಯವು ಅದನ್ನು ಸಹ ಕುಲಾಧಿಪತಿಗಳ ಮುಂದೆ ಇಡಬಹುದು.

**70. ಪ್ರಥಮ ಕುಲಪತಿಯವರ ನೇಮಕಾತಿ.–** 13ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮವು ಜಾರಿಯಲ್ಲಿ ಬಂದ ದಿನಾಂಕದಿಂದ ಆರು ತಿಂಗಳೊಳಗಾಗಿ ಸರ್ಕಾರವು, ಪ್ರಥಮ ಕುಲಪತಿಯವರನ್ನು ನಾಲ್ಕು ವರ್ಷಗಳಿಗೆ ಮೀರದ ಅವಧಿಗೆ ಮತ್ತು ತಾನು ಉಚಿತವೆಂದು ಭಾವಿಸುವ ಅಂಥ ಇತರ ಷರತ್ತುಗಳ ಮೇಲೆ ನೇಮಕ ಮಾಡತಕ್ಕದ್ದು:

ಪರಂತು, ಪ್ರಥಮ ಕುಲಪತಿಯವರಾಗಿ ನೇಮಕಗೊಂಡ ವ್ಯಕ್ತಿಯು, ತನ್ನ ಪದಾವಧಿಯಲ್ಲಿ ಅರವತ್ತೇಳು ವರ್ಷಗಳ ವಯಸ್ಸನ್ನು ಪೂರ್ಣಗೊಳಿಸಿದ್ದರೆ ತನ್ನ ಪದದಿಂದ ನಿವೃತ್ತನಾಗತಕ್ಕದ್ದು.

**71. ಪ್ರಥಮ ಕುಲಪತಿಯವರ ತಾತ್ಕಾಲಿಕ ಅಧಿಕಾರಗಳು.–** (1) ಸರ್ಕಾರವು, ಅಧಿಸೂಚನೆ ಮೂಲಕ ನಿರ್ದೇಶಿಸ ಬಹುದಾದಂತೆ, ಅಧಿಸೂಚಿತ ದಿನಾಂಕದಿಂದ ಆರು ತಿಂಗಳೊಳಗಾಗಿ ಅಥವಾ ಒಂದು ವರ್ಷಕ್ಕೆ ಮೀರದ ಅಂಥ ದೀರ್ಘ ಅವಧಿಯೊಳಗಾಗಿ, ವಿಶ್ವವಿದ್ಯಾಲಯದ ಶೈಕ್ಷಣಿಕ ಪರಿಷತ್ತು, ಸಿಂಡಿಕೇಟ್ ಮತ್ತು ಅಂಥ ಇತರ ಪ್ರಾಧಿಕಾರಗಳನ್ನು ರಚಿಸುವುದಕ್ಕಾಗಿ ವ್ಯವಸ್ಥೆಗಳನ್ನು ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) ಪ್ರಥಮ ಕುಲಪತಿಯವರು, ಸರ್ಕಾರದೊಂದಿಗೆ ಸಮಾಲೋಚಿಸಿ, ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಗೆ ಅಗತ್ಯವಿರಬಹುದಾದ ಅಂಥ ನಿಯಮಗಳನ್ನು ರಚಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಸರ್ಕಾರವು ಅಧಿಸೂಚನೆಯ ಮೂಲಕ, ಈ ಬಗ್ಗೆ ನಿರ್ದಿಷ್ಟಪಡಿಸಬಹುದಾದ ಅಂಥ ದಿನಾಂಕದಂದು ಪ್ರಕಾರ್ಯಗಳನ್ನು ಚಲಾಯಿಸಲು ಪ್ರಾರಂಭ ಮಾಡತಕ್ಕದ್ದು.

(4) ಅವಶ್ಯವಿರಬಹುದಾದ ಅಂಥ ಪರಿನಿಯಮಗಳ ಕರಡನ್ನು ಸಿದ್ಧಪಡಿಸಿ, ಅನುಮೋದನೆಗಾಗಿ ಸಿಂಡಿಕೇಟ್‌ಗೆ ಒಪ್ಪಿಸುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು. ಅಂಥ ಪರಿನಿಯಮಗಳು ರಚಿತವಾದಾಗ ಅವುಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು.

(5) ಈ ಅಧಿನಿಯಮ ಮತ್ತು ಪರಿನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ ಮತ್ತು ಒಂದು ಪ್ರಾಧಿಕಾರವು ಯಥೋಚಿತವಾಗಿ ರಚಿತವಾಗುವ ಅಂಥ ಕಾಲದವರೆಗೂ ಪ್ರಥಮ ಕುಲಪತಿಯವರು, ಈ ಅಧಿನಿಯಮ ಮತ್ತು ಪರಿನಿಯಮಗಳ ಅಡಿಯಲ್ಲಿ, ಅಂಥ ಪ್ರಾಧಿಕಾರದ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ತಾತ್ಕಾಲಿಕವಾಗಿ ಯಾವೊಬ್ಬ ಅಧಿಕಾರಿಯನ್ನು ನೇಮಿಸಬಹುದು ಅಥವಾ ಯಾವುದೇ ಸಮಿತಿಯನ್ನು ರಚಿಸಬಹುದು.

**72. ಕುಲಪತಿ ಮತ್ತು ಇತರ ಅಧಿಕಾರಿಗಳು ಮುಂತಾದವರು ಸಾರ್ವಜನಿಕ ನೌಕರರಾಗಿರಬೇಕು.–** ಕುಲಪತಿಯವರು, ಕುಲಸಚಿವರು, ಹಣಕಾಸು ಅಧಿಕಾರಿ ಮತ್ತು ವಿಶ್ವವಿದ್ಯಾಲಯದ ಇತರ ಉದ್ಯೋಗಿಗಳು, ಈ ಅಧಿನಿಯಮದ ಯಾವುದೇ ಉಪಬಂಧಗಳ ಅನುಸರಣೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ಅಥವಾ ಕಾರ್ಯ ನಿರ್ವಹಿಸುತ್ತಿರುವರೆಂದು ತಾತ್ಪರ್ಯವಾದಾಗ, ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರಾಗಿರುವರೆಂದು ಭಾವಿಸತಕ್ಕದ್ದು.

**73. ನೇಮಕಾತಿಯ ವಿಶೇಷ ವಿಧಾನ.–** (1) ಸಿಂಡಿಕೇಟ್ ತಾನು ಉಚಿತವೆಂದು ಭಾವಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಉನ್ನತ ವಿದ್ಯಾರ್ಹತೆ ಮತ್ತು ವೃತ್ತಿ ಪರಿಣತಿಯುಳ್ಳ ಒಬ್ಬ ವ್ಯಕ್ತಿಯನ್ನು ವಿಶ್ವವಿದ್ಯಾಲಯದ ಅಧ್ಯಾಪಕ ಅಥವಾ ಸಂಶೋಧನಾಧಿಕಾರಿ ಹುದ್ದೆಯನ್ನು ಸ್ವೀಕರಿಸಲು ಆಹ್ವಾನಿಸಬಹುದು ಮತ್ತು ಹಾಗೆ ಮಾಡಲು ಆ ವ್ಯಕ್ತಿಯು ಒಪ್ಪಿಕೊಂಡ ಮೇಲೆ, ಕುಲಾಧಿಪತಿಯವರ ಅನುಮೋದನೆಗೆ ಒಳಪಟ್ಟು ಆ ಹುದ್ದೆಗೆ ಅವರನ್ನು ನೇಮಿಸಬಹುದು.

(2) ಸಿಂಡಿಕೇಟ್, ನಿಯಮಿಸಲಾದ ರೀತಿಗೆ ಅನುಸಾರವಾಗಿ ಸಂಯುಕ್ತ ಯೋಜನೆಯನ್ನು ಕೈಗೊಳ್ಳುವುದಕ್ಕಾಗಿ ಇತರ ಯಾವುದೇ ವಿಶ್ವವಿದ್ಯಾಲಯ ಅಥವಾ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧ್ಯಾಪಕ ಅಥವಾ ಶೈಕ್ಷಣಿಕ ಸಿಬ್ಬಂದಿಯ ಇತರ ಯಾವೊಬ್ಬ ಸದಸ್ಯರನ್ನು ನೇಮಕ ಮಾಡಬಹುದು.

**74. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಕುಲಪತಿಯವರು, ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧಿನಿಯಮದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ಕರ್ತವ್ಯಗಳನ್ನು ಈ ಅಧಿನಿಯಮದಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಸ್ತಿತ್ವಕ್ಕೆ ಬರುವವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**75. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಪ್ರಥಮ ರಚನೆ ಅಥವಾ ಪುನರ್ ರಚನೆಗೆ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವುದಕ್ಕೆ ಸಂಬಂಧಿಸಿದಂತೆ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು ಅಂಥ ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕವೆಂದು ಅಥವಾ ಸೂಕ್ತವೆಂದು ತನಗೆ ಕಂಡು ಬರಬಹುದಾದಂತೆ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗಿರದ ಅಂಥ ಉಪಬಂಧಗಳನ್ನು ಅಧಿಸೂಚನೆ ಮೂಲಕ ರಚಿಸಬಹುದು:

ಪರಂತು, ಅಂಥ ಯಾವುದೇ ಅಧಿಸೂಚನೆಯನ್ನು, ಈ ಅಧಿನಿಯಮದ ಆರಂಭದ ದಿನಾಂಕದಿಂದ ಐದು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೇ ರಾಜ್ಯದ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚಿನ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯಲ್ಲಿ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅಂಥ ಅವಧಿಯು ಮುಕ್ತಾಯವಾಗುವ ಮೊದಲು, ರಾಜ್ಯ ವಿಧಾನ ಮಂಡಲದ ಯಾವುದೇ ಒಂದು ಸದನವು ಯಾವುದೇ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಿದರೆ ಅಥವಾ ಯಾವುದೇ ಅಧಿಸೂಚನೆಯು ಪರಿಣಾಮಕಾರಿಯಾಗಬಾರದೆಂದು ನಿರ್ದೇಶಿಸಿದರೆ ಮತ್ತು ಇನ್ನೊಂದು ಸದನವು ಅಂಥ ಮಾರ್ಪಾಟನ್ನು ಅಥವಾ ನಿರ್ದೇಶನವನ್ನು ಒಪ್ಪಿದರೆ, ಅಂಥ ಅಧಿಸೂಚನೆಯು ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ ಅಂಥ ಮಾರ್ಪಾಟು ಅಥವಾ ರದ್ದತಿಯು ಆ ಅಧಿಸೂಚನೆಯ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದರ ಮಾನ್ಯತೆಗೂ ಪ್ರತಿಕೂಲವಾಗಿರ ತಕ್ಕದ್ದಲ್ಲ.

**76. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಅಧ್ಯಾದೇಶ, 2011ನ್ನು (2011ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 01) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೨೭, ೨೦೧೨ (ಫಾಲ್ಗುಣ ೮, ಶಕ ವರ್ಷ ೧೯೩೩) | ನಂ. ೧೩೮ |
| --- | --- | --- |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 28 ಇಕಾಅ 2012, ಬೆಂಗಳೂರು, ದಿನಾಂಕ: 27.02.2012**

ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 (2012ರ ಕರ್ನಾಟಕ ಅಧಿನಿಯಮ ಸಂಖ್ಯೆ 01) ರ 1ನೇ ಪ್ರಕರಣ (2)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ಪೈಲಟ್ ಲಾಂಚ್ ಮಾಡಲಿರುವ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಹಾಯಕ ಕಂದಾಯ ಅಧಿಕಾರಿಗಳ ಕಛೇರಿ, ಜಯನಗರ, ಬೆಂಗಳೂರು ಇವುಗಳಿಗೆ

**ದಿನಾಂಕ 1ನೇ ಮಾರ್ಚ್ 2012** ನ್ನು ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ಜಾರಿಗೆ ಬರುವ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಶಶಿಕಲಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಆಸು–ನಾಗರಿಕ ಸೇವೆಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

**No.DPAR 28 EeKaAa 2012, Bangalore, Dated: 27th February 2012**

In exercise of the powers conferred under Section (1) of sub-section (2) of the Karnataka Guarantee of Services to the Citizens Act, 2011 (Karnataka Act No. 1 of 2012), the State Government specify **1st of March 2012** to be the date of effect of the provisions of the Karnataka Guarantee of Services to the Citizens Act in the Four talukas viz., Dharwad Taluk of Dharwad District, Aurad Taluk of Bidar District, Chitradurga Taluk of Chitradurga District and Puttur Taluk of Dakshina Kannada District and Office of the Assistant Revenue Officer, Jayanagar, Bangalore of Bruhath Bangalore Mahanaraga Palike where pilot is being launched.

By Order and in the name of the Governor of Karnataka,

**K.G.Shashikala**
Under Secretary to Government
Department of Personnel & Administrative
Reforms (AR-Citizen Services)

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV-A** | **ಬೆಂಗಳೂರು, ಸೋಮವಾರ, ಫೆಬ್ರವರಿ ೨೭, ೨೦೧೨ (ಫಾಲ್ಗುಣ ೮, ಶಕ ವರ್ಷ ೧೯೩೩** | ನಂ. ೧೩೯ |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 26 ಎಸ್ಎಂಆರ್ 2011, ಬೆಂಗಳೂರು, ದಿನಾಂಕ: 25.02.2012**

ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978 (1990 ರ ಕರ್ನಾಟಕ ಅಧಿನಿಯಮ 14) ರ 8 ನೇ ಪ್ರಕರಣದೊಂದಿಗೆ ಓದಲಾದ, 3ನೇ ಪ್ರಕರಣದ (1) ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ನ್ನು ಮತ್ತಷ್ಟು ತಿದ್ದುಪಡಿ ಮಾಡುವ ಉದ್ದೇಶದಿಂದ ಈ ಮುಂದಿನ ನಿಯಮಗಳ ಕರಡನ್ನು, ಸದರಿ ಅಧಿನಿಯಮದ 3 ನೇ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ರಾಜ್ಯ ಸರ್ಕಾರವು ಮೇಲೆ ನಿಗದಿಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು – 560001 ಇವರಿಗೆ ಸಲ್ಲಿಸಬಹುದು.

### ಕರಡು ನಿಯಮಗಳು

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) (ತಿದ್ದುಪಡಿ) ನಿಯಮಗಳು 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 2 ರ ತಿದ್ದುಪಡಿ:–** ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 2 ರ 'ವಿವರಣೆ'ಯ ಖಂಡ (ii) ರಲ್ಲಿರುವ "ನಾಲ್ಕು ಸಾವಿರ ರೂಪಾಯಿಗಳು" ಎಂಬ ಪದಗಳ ಬದಲಿಗೆ "ಆರು ಸಾವಿರ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 26 SMR 2011, Bangalore, dated: 25.02.2012**

The draft of the following rules further to amend the Karnataka Government Servants' (Medical Attendance) Rules, 1963, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore - 560 001.

### DRAFT RULES

**1. Title and commencement**:- (1) These rules may be called the Karnataka Government Servants' (Medical Attendance) (Amendment) Rules, 2012.

(2) They shall come into force from the date of their publication in the official Gazette.

**2. Amendment of rule 2**:- In the Karnataka Government Servants' (Medical Attendance) Rules, 1963, in rule 2, in 'Explanation', in clause (ii), for the words "four thousand rupees", the words "six thousand rupees" shall be substituted.

By Order and in the name of the Governor of Karnataka,

**D. NAGESH PHATAK**
Under Secretary to Government
Department of Personnel and Administrative Reforms (Service Rules)


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೨೭, ೨೦೧೨ (ಫಾಲ್ಗುಣ ೮, ಶಕ ವರ್ಷ ೧೯೩೩ | ನಂ. ೧೪೦ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 69 ಸೇನಿಸಿ 2011, ಬೆಂಗಳೂರು, ದಿನಾಂಕ: 27/02/2012**

ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) ರ ನಿಯಮ 8ರೊಂದಿಗೆ ಓದಲಾದ ನಿಯಮ 3ರ ಉಪ ನಿಯಮ (1) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಿ ಮೇಲೆ ಹೇಳಿದ ಅಧಿನಿಯಮ 3 ರ ಉಪನಿಯಮ 2 ರ ಕಲಂ (ಎ) ನಲ್ಲಿ ಅಗತ್ಯಪಡಿಸಲಾದಂತೆ ಅದರಿಂದ

ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಈ ಕರಡು ಅಧಿಸೂಚನೆಗೆ ಸಂಬಂಧಿಸಿದಂತೆ, ಮೇಲೆ ನಿಗಧಿಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು – 560001 ಇವರಿಗೆ ಸಲ್ಲಿಸಬಹುದು.

**ಕರಡು ನಿಯಮಗಳು**

1. **ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 21 ಕ್ಕೆ ತಿದ್ದುಪಡಿ:–** ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 21 ರ ಉಪನಿಯಮ (4) ರ ಖಂಡ (i) ರ ಉಪಖಂಡ (ಬಿ) ಪರಂತುಕದಲ್ಲಿರುವ "ತನ್ನ ಒಟ್ಟು ತಿಂಗಳ ಉಪಲಬ್ಧಗಳನ್ನು ಮೀರದಷ್ಟು ಮೊತ್ತವನ್ನು ಎಂಬ ಪದಗಳ ಬದಲಾಗಿ ತನ್ನ ಮೂರು ತಿಂಗಳ ಒಟ್ಟು ಉಪಲಬ್ಧಗಳನ್ನು ಮೀರದಷ್ಟು ಮೊತ್ತವನ್ನು" ಎಂದು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 69 SRC 2011, Bangalore, dated: 27.02.2012

Draft of the following rules further to amend the Karnataka Civil Services (Conduct) Rules, 1966, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore - 560001.

**DRAFT RULES**

1. **Title and Commencement**:- (1) These rules may be called the Karnataka Civil Services (Conduct) (Amendment) Rules, 2012.

(2) They shall come into force from the date of their publication in the Official Gazette.

2. **Amendment of Rule 21**:- In the Karnataka Civil Services (Conduct) Rules, 1966, in rule 21, in sub – rule (4), in clause (i), in sub–clause (b), in proviso for the words "an amount not exceeding his total monthly emoluments", the words "an amount not exceeding his three months emoluments" shall be substituted.

By order and in the name of the Governor of Karnataka

**DEVARAJU**
Deputy Secretary to Government
Department of Personnel and Administrative
Reforms (Service Rules)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಸೋಮವಾರ, ಫೆಬ್ರವರಿ ೨೭, ೨೦೧೨ (ಫಾಲ್ಗುಣ ೮, ಶಕ ವರ್ಷ ೧೯೩೩ | ನಂ. ೧೪೧ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಡಿಸಿಎ 18 ಎಆರ್‌ಬಿ 2011, ಬೆಂಗಳೂರು, ದಿನಾಂಕ : 27/02/2012

ಭಾರತ ಸಂವಿಧಾನದ 166ನೇ ಅನುಚ್ಛೇದದ ಕಲಮು (2) ಮತ್ತು (3) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977, ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸಿದ್ದಾರೆ. ಎಂದರೆ:–

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

   (2) ಇವುಗಳು ದಿನಾಂಕ: 01/12/2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರತಕ್ಕದ್ದೆಂದು ಭಾವಿಸತಕ್ಕದ್ದು.

2. **ಅನುಸೂಚಿ IV ಗೆ ತಿದ್ದುಪಡಿ:–** ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು 1977 (ಇನ್ನುಮುಂದೆ ಸದರಿ ನಿಯಮಗಳು ಎಂದು ಕರೆಯಲ್ಪಡುವವು) ರ ಅನುಸೂಚಿ **IV** ರಲ್ಲಿ **"ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ"** ಶೀರ್ಷಿಕೆಯಡಿಯಲ್ಲಿನ **"ಬಿ. ಸಣ್ಣ ಪ್ರಮಾಣದ ಕೈಗಾರಿಕೆಗಳು"** ಉಪಶೀರ್ಷಿಕೆಯಲ್ಲಿನ ಕ್ರಮ ಸಂಖ್ಯೆ: 8 ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಕೈಬಿಡತಕ್ಕದ್ದು.

3. **ಅನುಸೂಚಿ XVI ಗೆ ತಿದ್ದುಪಡಿ:–** ಸದರಿ ನಿಯಮಗಳಲ್ಲಿನ ಅನುಸೂಚಿ XVI ನಲ್ಲಿರುವ ಸಮಾಜ ಕಲ್ಯಾಣ ಇಲಾಖೆ ಶೀರ್ಷಿಕೆಯಡಿಯಲ್ಲಿನ **"**ಎ – ಸಮಾಜ ಕಲ್ಯಾಣ" ಉಪಶೀರ್ಷಿಕೆಯಡಿ ಕ್ರಮ ಸಂಖ್ಯೆ 14 ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ನಂತರ ಈ ಕೆಳಕಂಡದ್ದನ್ನು ಸೇರ್ಪಡೆ ಮಾಡತಕ್ಕದ್ದು. ಎಂದರೆ:–

   **"15. ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮವು ಒಳಗೊಂಡಂತೆ ಚರ್ಮ ಕೈಗಾರಿಕೆ"**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**

ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾ ನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

### No. DCA 18 ARB 2011, Bangalore, Dated: 27/02/2012

In exercise of the powers conferred by clauses (2) and (3) of Article 166 of the Constitution of India, the Governor of Karnataka hereby makes the following rules further to amend the Karnataka Government (Allocation of Business) Rules, 1977, namely:-

### RULES

1. **Title and Commencement:-** 1) These rules may be called the Karnataka Government (Allocation of Business) (Amendment) Rules, 2012.

   2) They shall be deemed to have come into force with effect from First day of December 2011.

2. **Amendment of Schedule IV:-** In the Karnataka Government (Allocation of Business) Rules, 1977 (hereinafter referred to as the said rules), in Schedule IV, under the heading "Commerce and Industries Department", under the sub heading "B - Small Scale Industries" **item No. 8 and the entries relating thereto** shall be omitted.

3. **Amendment of Schedule XVI:-** In Schedule **XVI** to the said rules, under the heading "Social Welfare Department", under the sub heading "A - Social Welfare" after item No. 14 and the entries relating thereto, the following shall be inserted, namely:-

**"15. Leather Industry including the Leather Industry Development Corporation"**

By order and in the name of the Governor of Karnataka

**DEVARAJU**
Deputy Secretary to Government
Department of Personnel and Administrative
Reforms (Service Rules)

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಫೆಬ್ರವರಿ ೨೮, ೨೦೧೨ (ಫಾಲ್ಗುಣ ೯, ಶಕ ವರ್ಷ ೧೯೩೩ | ನಂ. ೧೪೨ |
|---|---|---|

## URBAN DEVELOPMENT SECRETARIAT

### NOTIFICATION

### No. UDD 911 MNY 2010, Bangalore, Dated : 28-02-2012

The draft of the Karnataka Municipal Corporations (Absorption of Junior Engineer appointed on deputation basis in Bruhath Bangalore Mahanagara Palike) (Special) Rules, 2011 which the Government of Karnataka proposes to make in exercise of the powers conferred by sub-section (1) of section 91 read with Section 421 of the Karnataka Municipal Corporations Act, 1976 (Karnataka Act 14 of 1977) is hereby published as required by clause (a) of sub-section (3) of section 421 for the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Additional Chief Secretary to Government, Urban Development Department, Vikasa Soudha, Bangalore-560 001.

**DRAFT RULES**

**1. Title and commencement**.-(1) These rules may be called the Karnataka Municipal Corporations (Absorption of Junior Engineer appointed on deputation basis in Bruhath Bangalore Mahanagara Palike) (Special) Rules, 2011.

(2) They shall come into force from the date of their publication in the Official Gazette.

**2. Definitions**.- (1) In these rules, unless the context otherwise requires.-

(a) "Deputation Junior Engineer" means a Junior Engineer (Electrical) appointed in the Bruhath Bangalore Mahanagara Palike on deputation basis from Mysore Lamps Works Limited.

(b) "Schedule" means schedule appended to these rules.

(c) Other words and expressions used in these rules but not defined shall have the same meaning respectively assigned to them in the Karnataka Municipal Corporations Rules, 1977.

**3. Absorption of Deputation Junior Engineer in the Bruhath Bangalore Mahanagara Palike**.-

(1) Notwithstanding anything contained in the Karnataka Municipal Corporation Rules, 1977 or any other rules made or deemed to have been made under the provisions of the Karnataka Municipal Corporations Act, 1976

(Karnataka Act 14 of 1977), governing the method of recruitment of the employees of the Bruhath Bangalore Mahanagara Palike the Deputation Junior Engineer specified in Column (2) of the Schedule and continues as such in the Bruhath Bangalore Mahanagara Palike on the date of commencement of these rules, be absorbed in the corresponding category of post and scale of pay specified in columns (5) and (6) respectively, in the Bruhath Bangalore Mahanagara Palike Services.

Provided that no such person shall be absorbed.-

(i) If he was disqualified for appointment under the Karnataka Municipal Corporations Rules, 1977 on the date of appointment as Junior Engineer in the Mysore Lamps Works Limited,

(ii) If he does not possess the minimum academic qualification, if any, specified in the rules of recruitment applicable for the recruitment to the post, in which he is absorbed,

(iii) In any post reserved for the persons belonging to the category of Schedule Castes or Scheduled Tribes or other backward classes to which he was appointed as deputation Junior Engineer if he is found to be not belonging to such category. Otherwise such post shall be treated as backlog to be filled by process of Special recruitment from among these classes.

**4. Pay, Pension, Leave and Seniority of persons absorbed under these rules.-**

Notwithstanding anything contained in the Karnataka Municipal Corporations Rules, 1977,

(i) The initial basic pay of deputation Junior Engineer absorbed under these rules shall be fixed at the minimum of the pay scale applicable to the category of post to which he is absorbed under rule 3.

(ii) The services rendered by a person on deputation Junior Engineer prior to the date of absorption shall count for the purpose of leave, pension, but not for pay and seniority and grant of selection time scale of pay under Karnataka Civil Services (Time Bound Advancement) Rules, 1983 or for grant of selection time scale of pay under the Karnataka Civil Services (Automatic grant of special promotion to the senior scale of pay) Rules, 1991 and additional increment for having completed twenty years of service in the single cadre.

(iii) As regards pension and other retirement benefits, he shall be governed by terms and conditions as stipulated in Government Order No. FD (Spl) 04 PET 2005, dated 31.03.2006, i.e., New Defined contributory pension scheme introduced w.e.f. 01.04.2006 and/or pension policy of the Bruhath Bangalore Mahanagara Palike.

(iv) The deputationist so absorbed shall not receive any ex-gratia amount from his parent organization under the Voluntary Retirement Scheme and would be deemed to have resigned in the parent organization.

**SCHEDULE**

(See rule 3)

| **Sl. No.** | **Name of the deputation Engineer** | **Designation** | **Date of Deputation in the BBMP** | **Post in which absorbed** | **Scale of pay of the post in which absorbed** |
|---|---|---|---|---|---|
| **(1)** | **(2)** | **(3)** | **(4)** | **(5)** | **(6)** |
| 1 | K.N.Babureddy | Junior Engineer (Electrical) | 27.06.2003 | Junior Engineer (Electrical) | 8825-16000 |

By order and in the name of the Governor of Karnataka,

**S.RENUKARADHYA**
Under Secretary to Government
Urban Development Department

ವಿಶೇಷ ಪತ್ರಿಕೆ

| ಭಾಗ – **V** | ಬೆಂಗಳೂರು, ಮಂಗಳವಾರ, ಫೆಬ್ರವರಿ ೨೮, ೨೦೧೨ (ಫಾಲ್ಗುಣ ೯, ಶಕ ವರ್ಷ ೧೯೩೩) | ನಂ. ೧೪೩ |
|---|---|---|

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕವಿಪ:ಆ–1:19:ಖಾಹುಭ:2012, ಬೆಂಗಳೂರು, ದಿನಾಂಕ: 28.02.2012**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಖಾಲಿ ಇರುವ ಸಹಾಯಕರು, ಕಿರಿಯ ಸಹಾಯಕರು, ಬೆರಳಚ್ಚುಗಾರರು, ಬಡಗಿ, ಸ್ವೀಪರ್–ಕಂ–ಸ್ಕ್ಯಾವೆಂಜರ್/ ಕಾವಲುಗಾರ/ದಲಾಯತ್ ಮತ್ತು ಸೆಕ್ಯೂರಿಟಿ ಗಾರ್ಡ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಗಳು 2003ರ ತಿದ್ದುಪಡಿ ಅಧಿಸೂಚನೆ 2005 ಮತ್ತು 2011ರ ರೀತ್ಯಾ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಖಾಲಿ ಇರುವ ಸಹಾಯಕರು, ಕಿರಿಯ ಸಹಾಯಕರು, ಬೆರಳಚ್ಚುಗಾರರು, ಬಡಗಿ, ಸ್ವೀಪರ್–ಕಂ–ಸ್ಕ್ಯಾವೆಂಜರ್/ಕಾವಲುಗಾರ/ ದಲಾಯತ್ ಮತ್ತು ಸೆಕ್ಯೂರಿಟಿ ಗಾರ್ಡ್ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರ ಈ ಕೆಳಕಂಡಂತಿರುತ್ತದೆ.

**ಸಹಾಯಕರ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01 | ಪರಿಶಿಷ್ಟ ಜಾತಿ | 01 | – | – | – | – | – | – | 01 |
| 02 | ಸಾಮಾನ್ಯ | 01 | – | – | – | – | – | – | 01 |
| | **ಒಟ್ಟು** | **02** | – | – | – | – | – | – | **02** |

**ಕಿರಿಯ ಸಹಾಯಕರ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01. | 2ಎ | – | – | 01 | – | – | – | – | 01 |
| | ಒಟ್ಟು | – | – | 01 | – | – | – | – | 01 |

**ಬೆರಳಚ್ಚುಗಾರರ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01. | ಪರಿಶಿಷ್ಟ ಜಾತಿ | 01 | – | – | – | – | – | – | 01 |
| | **ಒಟ್ಟು** | 01 | – | – | – | – | – | – | 01 |

**ಬಡಗಿ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01. | ಪರಿಶಿಷ್ಟ ಪಂಗಡ | 01 | – | – | – | – | – | – | 01 |
| | **ಒಟ್ಟು** | 01 | – | – | – | – | – | – | 01 |

**ಸ್ವೀಪರ್–ಕಂ–ಸ್ಕ್ಯಾವೆಂಜರ್/ಕಾವಲುಗಾರ/ದಲಾಯತ್ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01. | ಸಾಮಾನ್ಯ | 02 | 01 | 01 | 01 | – | – | – | 05 |
| 02. | ಪರಿಶಿಷ್ಟ ಜಾತಿ | 01 | – | – | – | – | – | – | 01 |
| 03. | ಪರಿಶಿಷ್ಟ ಪಂಗಡ | – | 01 | – | – | – | – | – | 01 |
| 04. | ಪ್ರವರ್ಗ–II ಎ | 01 | – | – | – | – | – | – | 01 |
| 05. | ಪ್ರವರ್ಗ–III ಎ | – | 01 | – | – | – | – | – | 01 |
| 06 | ಪ್ರವರ್ಗ–III ಬಿ | – | 01 | – | – | – | – | – | 01 |
| | **ಒಟ್ಟು** | 04 | 04 | 01 | 01 | – | – | – | 10 |

**ಸೆಕ್ಯೂರಿಟಿ ಗಾರ್ಡ್ ಹುದ್ದೆಗಳ ಮೀಸಲಾತಿ ವರ್ಗೀಕರಣ**

| ಕ್ರ ಸಂ. | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರ್ವಸಿತರಾದವರು | ಅಂಗವಿಕಲರು | ಒಟ್ಟು |
|---|---|---|---|---|---|---|---|---|---|
| 01. | ಪರಿಶಿಷ್ಟ ಜಾತಿ | 01 | – | – | – | – | – | – | 01 |
| | **ಒಟ್ಟು** | 01 | – | – | – | – | – | – | 01 |

**01.** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: **28.03.2012**

**02.** ಅರ್ಜಿ ಸಲ್ಲಿಸಬೇಕಾದ ವಿಳಾಸ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5079, ಮೊದಲನೆ ಮಹಡಿ, ವಿಧಾನಸೌಧ, ಬೆಂಗಳೂರು–560001.

**03.** ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ನಿಯಮಾವಳಿಗನುಸಾರ ಮೇಲ್ಕಂಡ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಅರ್ಜಿ ನಮೂನೆ–1ರ ದ್ವಿಪ್ರತಿಯಲ್ಲಿ ಅರ್ಜಿಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದ ಪಡೆದು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಸಲ್ಲಿಸಬೇಕು.

**04. ಶುಲ್ಕ:**

ಅ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕವಿರುವುದಿಲ್ಲ.

ಆ) ಸಾಮಾನ್ಯ ಮತ್ತು ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳು ಕ್ರಾಸ್ ಮಾಡಿದ ರೂ. 25.00 ಗಳ ಇಂಡಿಯನ್ ಪೋಸ್ಟಲ್ ಆರ್ಡರನ್ನು ಅರ್ಜಿ ಸಲ್ಲಿಸುವ ದಿನಾಂಕದ 15 ದಿನಗಳೊಳಗಿರುವಂತೆ ಖರೀದಿಸಿ ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5079, ವಿಧಾನಸೌಧ, ಬೆಂಗಳೂರು – 560 001 ಈ ವಿಳಾಸಕ್ಕೆ ಪಾವತಿ ಮಾಡಬೇಕು. ಅರ್ಜಿ ಶುಲ್ಕವನ್ನು ಒಮ್ಮೆ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

**05. ವಿದ್ಯಾರ್ಹತೆ:**

| ಕ್ರ ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ವಿದ್ಯಾರ್ಹತೆ |
|---|---|---|---|---|
| 01 | ಸಹಾಯಕರು | ರೂ.8000–200–8600–225–9500–250–10500–300–12300–350–14400–400–14800 | **02** | 1) ಅಂಗೀಕೃತ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಅಥವಾ ರಾಜ್ಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಹೊಂದಿರಬೇಕು. ಅಂಗೀಕೃತ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಮತ್ತು ಗಣಕ ಯಂತ್ರದಲ್ಲಿ ಸಾಮಾನ್ಯ ಜ್ಞಾನವನ್ನು ಹೊಂದಿದವರಿಗೆ ಆದ್ಯತೆ ನೀಡಲಾಗುವುದು.<br>2) ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಕಿರಿಯ ಸಹಾಯಕರಾಗಿ ಸೇವೆ ಸಲ್ಲಿಸುತ್ತಿರುವ ಹಾಗೂ ಅಂಗೀಕೃತ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಹೊಂದಿರುವ ಅಭ್ಯರ್ಥಿಗೆ ಆದ್ಯತೆ ನೀಡಲಾಗುವುದು. |
| 02 | ಕಿರಿಯ ಸಹಾಯಕರು | ರೂ.5800–100–6000–125–6500–150–7100–175–7800–200–8600–225–9500–250–10500 | 01 | 1) ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿ ಹೊಂದಿರಬೇಕು.<br>2) ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಗ್ರೂಪ್ ಡಿ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ಹಾಗೂ ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿ ಹೊಂದಿರುವ ಅಭ್ಯರ್ಥಿಗೆ ಆದ್ಯತೆ ನೀಡಲಾಗುವುದು. |
| 03 | ಬೆರಳಚ್ಚುಗಾರರು | ರೂ.5800–100–6000–125–6500–150–7100–175–7800–200–8600–225–9500–250–10500 | 01 | 1) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿ ಹಾಗೂ ಮಾನ್ಯತೆ ಪಡೆದಿರುವ ಸಂಸ್ಥೆಯಿಂದ ಒಂದು ವರ್ಷದ ಕಂಪ್ಯೂಟರ್ ಕೋರ್ಸ್‌ನ್ನು ಮಾಡಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.<br>2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಆಂಗ್ಲ ಭಾಷೆಯ ಹಿರಿಯ ಶ್ರೇಣಿ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಶೀಘ್ರಲಿಪಿಯಲ್ಲಿ ಪರಿಣಿತಿ ಹೊಂದಿದವರಿಗೆ ಆದ್ಯತೆ ನೀಡಲಾಗುವುದು. |
| 4 | ಬಡಗಿ | ರೂ.5200–100–6000–125–6500–150–7100–175–7800–200–8200 | 01 | ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು ಮತ್ತು ಮಾನ್ಯತೆ ಪಡೆದ ಸಂಸ್ಥೆಯಿಂದ ಬಡಗಿ ಕೋರ್ಸ್ ಅಥವಾ ಜಿಲ್ಲಾ ಕೈಗಾರಿಕಾ ತರಬೇತಿ ಕೇಂದ್ರದಿಂದ ಸರ್ಟಿಫಿಕೇಟ್ ಹೊಂದಿರಬೇಕು. |
| 5 | ಸ್ವೀಪರ್–ಕಂ–ಸ್ಕ್ಯಾವೆಂಜರ್/ ಕಾವಲುಗಾರ/ ದಲಾಯತ್ | ರೂ.4800–100–6000–125–6500–150–7100–175–7275 | 10 | 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. |
| 6 | ಸೆಕ್ಯೂರಿಟಿ ಗಾರ್ಡ್ | ರೂ.4800–100–6000–125–6500–150–7100–175–7275 | 01 | 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. |

**06. ಕನಿಷ್ಠ ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿ:–**

| | | |
|---|---|---|
| ಸಾಮಾನ್ಯ ವರ್ಗ | : | 35 ವರ್ಷ |
| ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ | : | 38 ವರ್ಷ |
| ಪ.ಜಾ/ಪ.ಪಂ/ಪ್ರವರ್ಗ – I | : | 40 ವರ್ಷ |

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 6(3) ರಲ್ಲಿ ತಿಳಿಸಲಾಗಿರುವ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿಯಲ್ಲಿ ರಿಯಾಯಿತಿ ನೀಡಲಾಗುವುದು.

**07.** ಸರ್ಕಾರಿ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದ ಮೂಲಕ ನಿಗದಿತ ದಿನಾಂಕದೊಳಗೆ ಅರ್ಜಿ ಸಲ್ಲಿಸಬೇಕು.

**08.** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

**09.** ಆಯ್ಕೆಯಾದ ಯಾವುದೇ ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರಕ್ಕೆ ಅವನು/ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಯೋಗ್ಯವೆನಿಸಿದ ಹೊರತು ಅವನನ್ನು/ಅವಳನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

**10.** ಯಾವುದೇ ವ್ಯಕ್ತಿಯು ತನ್ನ ಉಮೇದುವಾರಿಕೆ ಬಗ್ಗೆ ಅಧಿಕಾರಿಗಳು ಮತ್ತು ಅಧಿಕಾರೇತರರುಗಳ ಒತ್ತಡ ತಂದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**11.** ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ದ್ವಿಪ್ರತಿಗಳನ್ನು ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ.

(ಆ) ಹುದ್ದೆಗೆ ಸೂಚಿಸಲಾಗಿರುವ ವಿದ್ಯಾರ್ಹತೆಗಳಿಗೆ ಸಂಬಂಧಿಸಿದ ಪ್ರಮಾಣ ಪತ್ರದ ನಕಲು ಪ್ರತಿ. (ಅಂಕಪಟ್ಟಿಗಳ ನಕಲು ಪ್ರತಿಗಳ ಸಮೇತ).

(ಇ) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವುದಕ್ಕೆ ಸಂಬಂಧಪಟ್ಟಂತೆ ದೃಢೀಕರಿಸುವ ಪ್ರಮಾಣ ಪತ್ರ.

(ಈ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸರ್ಕಾರದಿಂದ ನಿಗದಿಗೊಳಿಸಲ್ಪಟ್ಟಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(ಉ) ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವಂತೆ ಗಣ್ಯ ವ್ಯಕ್ತಿಗಳಿಂದ ಪಡೆದ ಇತ್ತೀಚಿನ ನಡವಳಿಕೆ ಹಾಗೂ ಶಾಲಾ ನಡವಳಿಕೆಯ ಪ್ರಮಾಣ ಪತ್ರ

(ಊ) 1 ರಿಂದ 10ನೇ ತರಗತಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ್ದಕ್ಕಾಗಿ ಸಂಬಂಧಪಟ್ಟ ಶಿಕ್ಷಣಾಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.

**ಸೂಚನೆ: ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದಲ್ಲ.**

**12.** ಅರ್ಜಿಗಳನ್ನು ನಮೂನೆ –Iರ ದ್ವಿಪ್ರತಿಯಲ್ಲಿ ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕ: **28.03.2012** ರಂದು ಸಂಜೆ : 4.00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು. ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

**13.** 2003ನೇ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿಗಳ ರೀತ್ಯಾ ಸದರಿ ಹುದ್ದೆಗಳ ಆಯ್ಕೆ ಪ್ರಕ್ರಿಯೆಯು ಕಾರ್ಯ ವಿಧಾನವನ್ನು ನಿಗಧಿಪಡಿಸುವ ಅಧಿಕಾರ ಮಾನ್ಯ ಸಭಾಪತಿಯವರಿಗೆ ಇರುತ್ತದೆ.

**ಸೂಚನೆ: –**

01. ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
02. ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ ಹಾಗೂ ಲೋಪ/ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
03. ಅರ್ಜಿಗಳ ಮೇಲೆ ಹುದ್ದೆಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.
04. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಮಾನ್ಯ ಸಭಾಪತಿಯವರ ಆದೇಶಾನುಸಾರ,

**ಎಸ್.ಶಕುಂತಳ**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನ ಪರಿಷತ್ತು.

| ಭಾಗ – IV-A | ಬೆಂಗಳೂರು, ಗುರುವಾರ, ಮಾರ್ಚ್ ೧, ೨೦೧೨ (ಫಾಲ್ಗುಣ ೧೧, ಶಕ ವರ್ಷ ೧೯೩೩) | ನಂ. ೧೪೪ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 04 ಇಕಾಅ 2012, ಬೆಂಗಳೂರು, ದಿನಾಂಕ: 1ನೇ ಮಾರ್ಚ್, 2012**

ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011ರ (2012ರ ಕರ್ನಾಟಕ ಅಧಿನಿಯಮ 1) 19ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿದ್ದು, ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ನಿಯಮಗಳು, 2012ರ ಕರಡನ್ನು ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳ ಮಾಹಿತಿಗಾಗಿ ದಿನಾಂಕ 14ನೇ ಫೆಬ್ರವರಿ 2012ರ ರಾಜ್ಯಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಿ ಅವರಿಂದ ಆಕ್ಷೇಪಣೆ, ಸಲಹೆ ಅಥವಾ ಸೂಚನೆಗಳನ್ನು ಆಹ್ವಾನಿಸಲಾಗಿತ್ತು. ಹಾಗೂ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ **ಹದಿನೈದು ದಿನಗಳು** ಮುಕ್ತಾಯವಾದ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ತಿಳಿಸಲಾಗಿತ್ತು.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ದಿನಾಂಕ 29–02–2012ಕ್ಕೆ ಮುಕ್ತಾಯವಾಗಿದ್ದು ಸ್ವೀಕರಿಸಲಾಗಿರುವ ಆಕ್ಷೇಪಣೆ, ಸಲಹೆ ಅಥವಾ ಸೂಚನೆಗಳನ್ನು ಪರಿಶೀಲಿಸಿದ ನಂತರ ರಾಜ್ಯ ಸರ್ಕಾರವು ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ನಿಯಮಗಳು, 2012ನ್ನು ಕೆಳಗಿನಂತೆ ಹೊರಡಿಸಿದೆ.

### ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ನಿಯಮಗಳು, 2012

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಇವುಗಳು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** (1) ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) 'ಅಧಿನಿಯಮ' ಎಂದರೆ, ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011(2012ರ ಕರ್ನಾಟಕ ಅಧಿನಿಯಮ 1);

(ಬಿ) 'ನಮೂನೆ' ಎಂದರೆ ಈ ನಿಯಮಗಳಿಗೆ ಲಗತ್ತಾದ ನಮೂನೆ;

(ಸಿ) 'ಪ್ರಕರಣ' ಎಂದರೆ ಅಧಿನಿಯಮದ ಪ್ರಕರಣ.

(2) ಈ ನಿಯಮಗಳಲ್ಲಿ ಬಳಸಲಾದ ಆದರೆ ಪರಿಭಾಷಿಸಿರದ ಪದಗಳು ಮತ್ತು ಪದಾವಳಿಗಳು ಅಧಿನಿಯಮದಲ್ಲಿ ಅವುಗಳಿಗೆ ಗೊತ್ತುಪಡಿಸಿದ ಅರ್ಥಗಳನ್ನು ಹೊಂದಿರತಕ್ಕದ್ದು.

**3. ಸೂಚನಾ ಫಲಕದ ಮೇಲೆ ಮಾಹಿತಿಯನ್ನು ಪ್ರದರ್ಶಿಸುವುದು.–** (1) ಸಾರ್ವಜನಿಕ ಪ್ರಾಧಿಕಾರದ ಹೆಸರಿಸಲಾದ ಅಧಿಕಾರಿ ಮತ್ತು ಆತನ ಅಧೀನ ಸಾರ್ವಜನಿಕ ನೌಕರನು, ಸಾಮಾನ್ಯ ಸಾರ್ವಜನಿಕ ಅನುಕೂಲಕ್ಕಾಗಿ, ತನ್ನ ಕಚೇರಿಯಲ್ಲಿ ಲಭ್ಯವಿರುವ ಸೇವೆಗಳ ಬಗೆಗಿನ ಎಲ್ಲಾ ಯುಕ್ತ ಮಾಹಿತಿಯನ್ನು ಅಧಿನಿಯಮದ ಷೆಡ್ಯೂಲ್‌ನಲ್ಲಿ ನಿಗದಿಪಡಿಸಿರುವಂತೆ ಸೂಚನಾಫಲಕದ ಮೇಲೆ ಪ್ರದರ್ಶಿಸತಕ್ಕದ್ದು. ಅಧಿನಿಯಮದ 3ನೇ ಪ್ರಕರಣದ (2)ನೇ ಉಪಪ್ರಕರಣದನ್ವಯ ಸೇವೆಗಳನ್ನು ಸ್ವೀಕರಿಸುವುದಕ್ಕಾಗಿ ಕಾಲಮಿತಿಯನ್ನೊಳಗೊಂಡ ಗೊತ್ತುಪಡಿಸಲಾದ ಸೇವೆಗಳು, ದಾಖಲೆಗಳ ತಪಶೀಲು ಪಟ್ಟಿ (ಚೆಕ್ ಲಿಸ್ಟ್), ನಿಗದಿತ ಶುಲ್ಕ, ಕಡ್ಡಾಯವಾಗಿ ನೀಡಬೇಕಾದ ಸ್ವೀಕೃತಿ ಪತ್ರ, ತಿರಸ್ಕರಿಸಿದ ಅರ್ಜಿಗಳಿಗೆ ನಿರ್ದಿಷ್ಟವಾದ ಕಾರಣ, ವಿಳಂಬ ಮತ್ತು ಸೇವೆಯನ್ನು ಕಾಲಮಿತಿಯೊಳಗೆ ನೀಡದ ಕಾರಣ ಸಕ್ಷಮ ಅಧಿಕಾರಿಯಿಂದ ಪರಿಹಾರ ವೆಚ್ಚವನ್ನು ಪಡೆಯುವ ಕಾರ್ಯವಿಧಾನ, ಮೇಲ್ಮನವಿ ಅಧಿಕಾರಿಯವರನ್ನು ಸಂಪರ್ಕಿಸಬೇಕಾದ ವಿವರಗಳನ್ನು, ಅರ್ಜಿಗಳ ಸ್ಥಿತಿಗತಿಗಳ ನಿರ್ವಹಣೆಗಾಗಿ ಕಾರ್ಯವಿಧಾನ ಪ್ರದರ್ಶಿಸತಕ್ಕದ್ದು. **(ನಮೂನೆ–ಅ)** ಇಂತಹ ಸೂಚನಾ ಫಲಕವನ್ನು ಕಛೇರಿಯ ಮುಂಭಾಗದಲ್ಲಿ ಪ್ರದರ್ಶಿಸತಕ್ಕದ್ದು. ಹಾಗೂ ಅಧಿಕೃತ ಅರ್ಜಿಗಳ ಸಾಕಷ್ಟು ಪ್ರತಿಗಳನ್ನು ಅರ್ಜಿ ಸ್ವೀಕೃತ ಕೌಂಟರುಗಳಲ್ಲಿ ಒದಗಿಸತಕ್ಕದ್ದು.

(2) ಸಾರ್ವಜನಿಕ ಆದಿಪತ್ಯದಲ್ಲಿ ಅಂಥ ಮಾಹಿತಿಯನ್ನು ಪ್ರದರ್ಶನ ಮಾಡಿರದ ಪ್ರಕರಣದಲ್ಲಿ, ಸಕ್ಷಮ ಅಧಿಕಾರಿಯು, ಹೆಸರಿಸಲಾದ ಅಧಿಕಾರಿಯ ಮೂಲಕ ಸುಧಾರಣಾ ಕ್ರಮವನ್ನು ಪ್ರಾರಂಭಿಸತಕ್ಕದ್ದು.

**4. ಅರ್ಜಿಯನ್ನು ಸ್ವೀಕರಿಸುವ ಮತ್ತು ಅರ್ಜಿದಾರರಿಗೆ ಸ್ವೀಕೃತಿಯನ್ನು ನೀಡುವ ವಿಧಾನ:– (1)** ಅನುಸೂಚಿಯಲ್ಲಿ ನಮೂದಿಸಿರುವ ಒಂದು ಅಥವಾ ಹೆಚ್ಚಿನ ಸೇವೆಗಳನ್ನು ಪಡೆಯಲು ಬಯಸುವ ನಾಗರೀಕರು ನಿಗದಿತ ಅರ್ಜಿ ನಮೂನೆಯಲ್ಲಿ ತಾಳೆಪಟ್ಟಿಯಲ್ಲಿ ಹೇಳಿರುವ ಎಲ್ಲಾ ದಾಖಲಾತಿಗಳೊಂದಿಗೆ ಹೆಸರಿಸಲಾದ ಅಧಿಕಾರಿಗೆ ಅರ್ಜಿಯನ್ನು ಸ್ವೀಕೃತ ಕೌಂಟರುಗಳಲ್ಲಿ / ನೋಂದಣಿ ಅಂಚೆ ಸ್ವೀಕೃತಿ ಬಾಕಿ/ ಅಂಚೆ/ಇ–ಮೈಲ್ ಸಲ್ಲಿಸಬಹುದಾಗಿದೆ.

(2) ಹೆಸರಿಸಲಾದ ಅಧಿಕಾರಿ ಅಥವಾ ಅಧಿಕೃತ ವ್ಯಕ್ತಿಯು, ಲಿಖಿತ ರೂಪದಲ್ಲಿ ಅಥವಾ ನಿಯಮಿಸಿದೆಡೆಯಲ್ಲಿ ಅಂಥ ನಮೂನೆಯಲ್ಲಿ, ಅರ್ಜಿಯನ್ನು ಸ್ವೀಕರಿಸಿದಾಗ, **ನಮೂನೆ–ಆ** ಯಲ್ಲಿ ಅರ್ಜಿದಾರನಿಗೆ ಯುಕ್ತ ಸ್ವೀಕೃತಿಯನ್ನು ನೀಡತಕ್ಕದ್ದು. ಪ್ರತಿಯೊಂದು ಅರ್ಜಿಗೆ ಒಂದು ಗಣಕೀಕೃತ ಸ್ವೀಕೃತಿ ಸಂಖ್ಯೆಯನ್ನು ನೀಡತಕ್ಕದ್ದು.

(3) ಅರ್ಜಿಯೊಂದಿಗೆ ಯಾವುದೇ ಅವಶ್ಯಕ ದಸ್ತಾವೇಜುಗಳನ್ನು ಲಗತ್ತಿಸಿರದ ಸಂದರ್ಭದಲ್ಲಿ, ಅದನ್ನು ಸ್ವೀಕೃತಿಯಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು ಮತ್ತು ಅಂಥ ಸ್ವೀಕೃತಿಗಳಲ್ಲಿ ಸೇವೆ ಒದಗಿಸುವ ದಿನಾಂಕವನ್ನು ನಮೂದಿಸತಕ್ಕದ್ದಲ್ಲ.

(4) ಅರ್ಜಿಯೊಂದಿಗೆ ಎಲ್ಲಾ ಅವಶ್ಯಕ ದಸ್ತಾವೇಜುಗಳನ್ನು ಲಗತ್ತಿಸಿದ್ದಲ್ಲಿ ಮತ್ತು ಅರ್ಜಿಯು ಎಲ್ಲಾ ವಿಧಗಳಲ್ಲಿಯೂ ಪೂರ್ಣವಾಗಿದ್ದಲ್ಲಿ, ಆಗ ಸೇವೆ ಒದಗಿಸುವ ದಿನಾಂಕವನ್ನು ನಮೂದಿಸತಕ್ಕದ್ದು.

**5. ಸಾರ್ವಜನಿಕ ರಜಾ ದಿನಗಳನ್ನು ಒಳಗೊಂಡಿರತಕ್ಕದ್ದಲ್ಲ:–** ಸೇವೆಯ ವಿಲೆಗಾಗಿ ಗೊತ್ತುಪಡಿಸಿದ ಕಾಲಮಿತಿಯನ್ನು ಲೆಕ್ಕಹಾಕುವಾಗ ಸಾರ್ವಜನಿಕ ರಜಾದಿನಗಳನ್ನು ಒಳಗೊಂಡಿರತಕ್ಕದ್ದಲ್ಲ.

**6. ಪರಿಹಾರ ವೆಚ್ಚವನ್ನು ಕೋರುವ ಮತ್ತು ಪಾವತಿಮಾಡುವ ವಿಧಾನ:–** (1) ನಾಗರಿಕ ಸಂಬಂಧಿ ಸೇವೆಗಳಿಗಾಗಿ ಅರ್ಜಿಯನ್ನು ಸಲ್ಲಿಸಿರುವ ನಾಗರಿಕನು, ನಮೂನೆ– ಆ ಪ್ರತಿಯನ್ನು ಸಕ್ಷಮ ಅಧಿಕಾರಿಗೆ ಸಲ್ಲಿಸಿ/ಕರೆ ಕೇಂದ್ರದ ಮೂಲಕವೂ ದಾಖಲಿಸಿ ಪರಿಹಾರದ ವೆಚ್ಚವನ್ನು ಕೋರುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

(2) ಸಕ್ಷಮ ಅಧಿಕಾರಿಯು, ಪರಿಹಾರದ ವೆಚ್ಚಕ್ಕಾಗಿನ ಅರ್ಜಿಯನ್ನು, ದಿನಾಂಕ ಮತ್ತು ಮೊಹರಿನೊಂದಿಗೆ, ಸ್ವೀಕರಿಸತಕ್ಕದ್ದು ಅಥವಾ ಸ್ವೀಕರಿಸುವಂತೆ ಮಾಡತಕ್ಕದ್ದು.

(3) ಪರಿಹಾರ ವೆಚ್ಚಕ್ಕಾಗಿನ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅರ್ಜಿದಾರನು ಅರ್ಹನಾದ ಪರಿಹಾರ ವೆಚ್ಚವನ್ನು ಸಕ್ಷಮ ಅಧಿಕಾರಿಯು ಆನ್‌ಲೈನ್ ಮಾಹಿತಿ ಆಧಾರದ ಮೇಲೆ ಮೌಲ್ಯಮಾಪನ ಮಾಡತಕ್ಕದ್ದು ಮತ್ತು ಅದನ್ನು ಪಾವತಿ ಮಾಡುವುದಕ್ಕೆ ಕಚೇರಿಯ ಇಂಪ್ರೆಸ್ಟ್ ಮೊತ್ತದಿಂದ ತಕ್ಷಣ ಪಾವತಿಸಿ ಸ್ವೀಕೃತಿ ಸಹಿಯನ್ನು ಪಡೆಯತಕ್ಕದ್ದು. ತದನಂತರ ಆತನು 11ನೇ ಪ್ರಕರಣದ ಅಡಿಯಲ್ಲಿ ಅನುಸೂಚಿಯಲ್ಲಿ ನಿಗದಿಪಡಿಸಿರುವ ಕಾಲಮಿತಿಯಲ್ಲಿ ತಪ್ಪಿತಸ್ಥ ಸಾರ್ವಜನಿಕ ನೌಕರನಿಂದ ಅದನ್ನು 30 ದಿನಗಳೊಳಗಾಗಿ ವಸೂಲು ಮಾಡಲು ಕ್ರಮವಹಿಸತಕ್ಕದ್ದು.

**7. ನೋಟೀಸನ್ನು ನೀಡುವ ವಿಧಾನ:–** ಸಕ್ಷಮ ಅಧಿಕಾರಿಯು, ಪರಿಹಾರವನ್ನು ಪಾವತಿ ಮಾಡಿದ ಅರ್ಜಿಯ ಪ್ರತಿಯನ್ನು ಆತನಿಗೆ ಒದಗಿಸುವಲ್ಲಿ ವಿಳಂಬಕ್ಕೆ ಅಥವಾ ತಪ್ಪಿಗೆ ಹೊಣೆಗಾರನಾದ ಹೆಸರಿಸಲಾದ ಅಧಿಕಾರಿ ಅಥವಾ ಅಧೀನ ಸಿಬ್ಬಂದಿಗೆ ನೋಟೀಸನ್ನು ನೀಡತಕ್ಕದ್ದು ಮತ್ತು ಪಾವತಿ ಮಾಡಿದ ಪರಿಹಾರ ವೆಚ್ಚವನ್ನು ಆತನಿಂದ ಏಕೆ ವಸೂಲು ಮಾಡಬಾರದೆಂಬುದಕ್ಕೆ ಕಾರಣಗಳನ್ನು ಕೇಳತಕ್ಕದ್ದು. ತಪ್ಪಿತಸ್ಥ ಅಥವಾ ವಿಳಂಬ ಮಾಡಿದ ಅಧಿಕಾರಿ ಅಥವಾ ಸಿಬ್ಬಂದಿಗೆ ಕಾರಣಗಳನ್ನು ಯಾವ ಕಾಲಮಿತಿಯೊಳಗೆ ಒದಗಿಸಬೇಕೆಂಬುದನ್ನೂ ಆತನು ಸೂಚಿಸತಕ್ಕದ್ದು. **(ನಮೂನೆ–ಇ)**

**8. ಶುಲ್ಕವನ್ನು ಸಡಿಲಗೊಳಿಸುವುದು:–** ಸಕ್ಷಮ ಅಧಿಕಾರಿಗೆ ಅಥವಾ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿಗಾಗಿ ಯಾವುದೇ ಶುಲ್ಕವನ್ನು ವಿಧಿಸತಕ್ಕದ್ದಲ್ಲ.

**9. ಸಕ್ಷಮ ಅಧಿಕಾರಿಗೆ ಅರ್ಜಿ ಸಲ್ಲಿಸುವ ಕಾರ್ಯವಿಧಾನ.:–** ಸಕ್ಷಮ ಅಧಿಕಾರಿಗೆ ಸಲ್ಲಿಸುವ ಅರ್ಜಿಯು **ನಮೂನೆ–ಬಿ** ಪ್ರತಿಯೊಂದಿಗೆ / ಕರೆ ಕೇಂದ್ರ ಮೂಲಕ ಸಲ್ಲಿಸುವುದು.

**10.ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿಯೊಂದಿಗೆ ಲಗತ್ತಿಸಬೇಕಾದ ದಸ್ತಾವೇಜುಗಳು:–** ನಮೂನೆ **"ಈ"** ಪ್ರತಿಯೊಂದಿಗೆ ಅರ್ಜಿ ಸಲ್ಲಿಸುವುದು.

ಸಕ್ಷಮ ಅಧಿಕಾರಿಯ ಆದೇಶದ ಮೇಲೆ ನೊಂದ ಹೆಸರಿಸಲಾದ ಅಧಿಕಾರಿ ಅಥವಾ ಯಾವುದೇ ಸಾರ್ವಜನಿಕ ನೌಕರನು ಅವರುಗಳ ಮೇಲ್ಮನವಿ ಅರ್ಜಿಯ ಜೊತೆಗೆ ಪರಿಹಾರ ವೆಚ್ಚವನ್ನು ಪಾವತಿಸಿರುವುದಕ್ಕೆ ದಾಖಲೆಯನ್ನು ಒದಗಿಸತಕ್ಕದ್ದು. ಅಂತಹ ದಾಖಲೆಯಿಲ್ಲದ ಅರ್ಜಿಗಳನ್ನು ಅಂಗೀಕರಿಸತಕ್ಕದ್ದಲ್ಲ.

**11. ಮೊದಲ ಅಥವಾ ಎರಡನೇ ಮೇಲ್ಮನವಿಯ ಮೇಲೆ ತೀರ್ಮಾನದ ಕಾರ್ಯ ವಿಧಾನ:–** ಹೆಸರಿಸಲಾದ ಪ್ರಾಧಿಕಾರದ ಅಥವಾ ಸಕ್ಷಮ ಪ್ರಾಧಿಕಾರದ ಆದೇಶಗಳ ಮೇಲಿನ ತೀರ್ಮಾನವು ಈ ಮುಂದಿನ ಹಂತಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(1) ಸಂಬಂಧಿಸಿದ ದಸ್ತಾವೇಜುಗಳು, ಸಾರ್ವಜನಿಕ ದಾಖಲೆಗಳು ಅಥವಾ ಅವುಗಳ ಪ್ರತಿಗಳ ಪುನರೀಕ್ಷಣೆ;

(2) ಅಸಾಧಾರಣ ಸಂದರ್ಭಗಳಲ್ಲಿ ಅಗತ್ಯ ತಪಾಸಣೆಗಾಗಿ ಯಾವೊಬ್ಬ ಇತರೆ ಅಧಿಕಾರಿಯನ್ನು ಪ್ರಾಧಿಕೃತಗೊಳಿಸ ಬಹುದು;

(3) ಅಹವಾಲನ್ನು ಕೇಳುವುದಕ್ಕಾಗಿ ಪುನರೀಕ್ಷಣೆಯ ಯಾವುದೇ ಸಮಯದಲ್ಲಿ ಹೆಸರಿಸಲಾದ ಅಧಿಕಾರಿ ಅಥವಾ ಸಕ್ಷಮ ಅಧಿಕಾರಿಯನ್ನು **ಸಮನು** ಮಾಡಬಹುದು.

**12. ಕೇಳುವಿಕೆಯ (ಹಿಯರಿಂಗ್) ಮಾಹಿತಿಯನ್ನು ತಿಳಿಸುವ ಪ್ರಕ್ರಿಯೆ:–** ಸಕ್ಷಮ ಅಧಿಕಾರಿ ಅಥವಾ ಮೇಲ್ಮನವಿ ಪ್ರಾಧಿಕಾರಿಯು ಅರ್ಜಿಯ ಮೇಲಿನ ಕೇಳುವಿಕೆಯ ಮಾಹಿತಿಯನ್ನು ಈ ಮುಂದಿನ ಯಾವುದಾದರೂ ಒಂದು ವಿಧಾನದಲ್ಲಿ ತಿಳಿಸತಕ್ಕದ್ದು, ಎಂದರೆ:–

(1) ಖುದ್ದಾಗಿ ನೀಡುವುದು;

(2) ಸ್ವೀಕೃತಿಯೊಡನೆ ನೋಂದಾಯಿತ ಅಂಚೆಯ ಮೂಲಕ; ಅಥವಾ

(3) ದೂರವಾಣಿ /ಫ್ಯಾಕ್ಸ್ / ಇ–ಮೇಲ್ / ಎಸ್.ಎಂ.ಎಸ್ ಮೂಲಕ (ಅರ್ಜಿದಾರರನ್ನು ಶೀಘ್ರ ಸಂಪರ್ಕ ಇರುವ ಯಾವುದೇ ವಿಧಾನದ ಮೂಲಕ).

(4) ಕೆ.ಜಿ.ಎಸ್.ಸಿ. ತಂತ್ರಾಂಶದಲ್ಲಿಯೂ ಈ ಮಾಹಿತಿಯನ್ನು ಅಳವಡಿಸತಕ್ಕದ್ದು.

**13. ಅರ್ಜಿದಾರ ಅಥವಾ ಹೆಸರಿಸಲಾದ ಅಧಿಕಾರಿ ಅಥವಾ ಸಕ್ಷಮ ಅಧಿಕಾರಿಯ ವೈಯಕ್ತಿಕ ಹಾಜರಿ:–** (1) ಎಲ್ಲಾ ಸನ್ನಿವೇಶಗಳಲ್ಲೂ ಕೇಳುವಿಕೆಯ (ಹಿಯರಿಂಗ್) ದಿನಾಂಕವನ್ನು ಕನಿಷ್ಠ ಏಳು ದಿನಗಳ ಮೊದಲು ಅರ್ಜಿದಾರನಿಗೆ ಅಥವಾ ಹೆಸರಿಸಲಾದ ಅಧಿಕಾರಿಗೆ ಅಥವಾ ಸಂದರ್ಭಾನುಸಾರವಾಗಿ ಸಕ್ಷಮ ಅಧಿಕಾರಿಗೆ ತಿಳಿಸತಕ್ಕದ್ದು.

(2) ಅರ್ಜಿದಾರ ಅಥವಾ ಹೆಸರಿಸಲಾದ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಸಕ್ಷಮ ಅಧಿಕಾರಿಯು ಕೇಳುವಿಕೆಯ ಸಂದರ್ಭದಲ್ಲಿ ಖುದ್ದಾಗಿ ಅಥವಾ ಆತನಿಂದ ಪ್ರಾಧಿಕೃತನಾದ ವ್ಯಕ್ತಿಯು ಹಾಜರಿರತಕ್ಕದ್ದು.

(3) ಕೇಳುವಿಕೆಯ ದಿನಾಂಕವನ್ನು ಸೂಕ್ತವಾಗಿ ತಿಳಿಸಿದ್ದಾಗ್ಯೂ ಯಾವೊಬ್ಬ ಪಕ್ಷಕಾರನು ಕೇಳುವಿಕೆಯ ದಿನಾಂಕದಂದು ಗೈರು ಹಾಜರಾದರೆ ಅರ್ಜಿಯನ್ನು ಏಕ ಪಕ್ಷೀಯವಾಗಿ ತೀರ್ಮಾನಿಸಬಹುದು.

**14. ಮೇಲ್ಮನವಿಯಲ್ಲಿ ಆದೇಶ:–** (1) ಸಕ್ಷಮ ಅಧಿಕಾರಿ ಅಥವಾ ಸಂದರ್ಭಾನುಸಾರ ಮೇಲ್ಮನವಿ ಪ್ರಾಧಿಕಾರಿಯು ಆದೇಶವನ್ನು ಮುಕ್ತ ಕೇಳುವಿಕೆ (ಓಪನ್ ಹಿಯರಿಂಗ್) ಯಲ್ಲಿ ಘೋಷಿಸತಕ್ಕದ್ದು ಮತ್ತು ಇದು ಲಿಖಿತದಲ್ಲಿ ಇರತಕ್ಕದ್ದು **(ನಮೂನೆ–ಈ)**.

(2) ಸಕ್ಷಮ ಅಧಿಕಾರಿಯು ಮೇಲ್ಮನವಿ ಆದೇಶದ ಪ್ರತಿಯನ್ನು ಅರ್ಜಿದಾರನಿಗೆ ಮತ್ತು ಹೆಸರಿಸಲಾದ ಅಧಿಕಾರಿಗೆ ಆದೇಶದ ದಿನಾಂಕದಿಂದ ಏಳು ದಿನಗಳೊಳಗೆ ನೀಡತಕ್ಕದ್ದು.

(3) ಮೇಲ್ಮನವಿ ಪ್ರಾಧಿಕಾರಿಯು ಮೇಲ್ಮನವಿ ಆದೇಶದ ಪ್ರತಿಯನ್ನು ಅರ್ಜಿದಾರರಿಗೆ, ಹೆಸರಿಸಲಾದ ಅಧಿಕಾರಿಗೆ ಮತ್ತು ಸಕ್ಷಮ ಅಧಿಕಾರಿಗೆ ನೀಡತಕ್ಕದ್ದು.

(4) ಪರಿಹಾರ ವೆಚ್ಚವನ್ನು ವಿಧಿಸಿದ ಸಂದರ್ಭದಲ್ಲಿ, ಸಕ್ಷಮ ಅಧಿಕಾರಿ ಅಥವಾ ಸಂದರ್ಭನುಸಾರ ಮೇಲ್ಮನವಿ ಪ್ರಾಧಿಕಾರಿಯು ಅಂಥ ಆದೇಶದ ಪ್ರತಿಯನ್ನು ಹೆಸರಿಸಲಾದ ಅಧಿಕಾರಿ ಅಥವಾ ಆತನ ಅಧೀನದಲ್ಲಿಯ ಸಾರ್ವಜನಿಕ ನೌಕರನ ಅಥವಾ ಸಂದರ್ಭಾನುಸಾರವಾಗಿ ಸಕ್ಷಮ ಪ್ರಾಧಿಕಾರಿಯ ಸಂಬಳ ಅಥವಾ ಗೌರವ ಧನ ಅಥವಾ ಪರಿಶ್ರಮ ಧನದಿಂದ ಮೊಬಲಗನ್ನು ಕಡಿತಗೊಳಿಸುವುದಕ್ಕೆ ಸೂಚನೆಗಳೊಡನೆ ಸಂಬಂಧಪಟ್ಟ ಸಾರ್ವಜನಿಕ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು.

(5) ಹೆಸರಿಸಲಾದ ಅಧಿಕಾರಿ ಅಥವಾ ಆತನ ಅಧೀನದಲ್ಲಿಯ ಸಾರ್ವಜನಿಕ ನೌಕರ ಅಥವಾ ಸಂದರ್ಭಾನುಸಾರವಾಗಿ ಸಕ್ಷಮ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಗೆ ಶಿಫಾರಸ್ಸು ಮಾಡಿದ ಸಂದರ್ಭದಲ್ಲಿ, ಮೇಲ್ಮನವಿ ಪ್ರಾಧಿಕಾರಿಯು ಆತನ ವಿರುದ್ಧ ಹೊರಡಿಸಿದ ಆದೇಶವನ್ನು ಸಂಬಂಧಪಟ್ಟ ಸಾರ್ವಜನಿಕ ಪ್ರಾಧಿಕಾರ ಅಥವಾ ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

**15. ಪರಿಹಾರ ವೆಚ್ಚದ ವಸೂಲಿ:–** ಸಕ್ಷಮ ಅಧಿಕಾರಿಯು, ಪರಿಹಾರ ವೆಚ್ಚವನ್ನು ವಿಧಿಸುವ ಆದೇಶದ ಪ್ರತಿಯನ್ನು ಸ್ವೀಕರಿಸಿದ ಮೇಲೆ ಹೆಸರಿಸಲಾದ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಸಕ್ಷಮ ಅಧಿಕಾರಿ ಅಥವಾ ಮೇಲ್ಮನವಿ ಅಧಿಕಾರಿಯು ನಿರ್ಧರಿಸಬಹುದಾದಂತೆ ಅಧಿಕಾರಿಗಳು ಹಾಗೂ ಸಿಬ್ಬಂದಿಯ ಮುಂಬರುವ ವೇತನದಿಂದ ಅಥವಾ ಗೌರವಧನದಿಂದ ಅಥವಾ ಪರಿಶ್ರಮ ಧನದಿಂದ ಪರಿಹಾರ ವೆಚ್ಚವನ್ನು ವಸೂಲು ಮಾಡುವಂತೆ ಮಾಡತಕ್ಕದ್ದು ಮತ್ತು ಅದನ್ನು ಸಂಬಂಧಪಟ್ಟ ಇಲಾಖೆಗಳ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಜಮೆ ಮಾಡತಕ್ಕದ್ದು ಹಾಗೂ ಚಲನಿನ ಪ್ರತಿಯನ್ನು ಸಂಬಂಧಿಸಿದ ಹೆಸರಿಸಲಾದ ಅಧಿಕಾರಿಗೆ ಕಳುಹಿಸತಕ್ಕದ್ದು.

**16. ಅಧಿನಿಯಮದಡಿಯಲ್ಲಿ ವಿಲೆಯಾದ ಎಲ್ಲಾ ಪ್ರಕರಣಗಳ ದಾಖಲೆಗಳ ನಿರ್ವಹಣೆ:–** ಹೆಸರಿಸಲಾದ ಅಧಿಕಾರಿ, ಸಕ್ಷಮ ಅಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರಗಳು ಅನುಕ್ರಮವಾಗಿ **ನಮೂನೆ–ಉ–1, ಉ–2, ಉ–3 ಗಳಲ್ಲಿ** ಎಲ್ಲಾ ಪ್ರಕರಣಗಳ ದಾಖಲೆಗಳನ್ನು ನಿರ್ವಹಿಸತಕ್ಕದ್ದು ಮತ್ತು ವಿಶೇಷವಾಗಿ ಉ–1 ನಮೂನೆ ಪ್ರಕಾರ ವಿಳಂಬ ಹಾಗೂ ವಿಫಲತೆ ಪ್ರಕರಣಗಳ ಬಗ್ಗೆ ತೆಗೆದುಕೊಂಡ ಕ್ರಮವನ್ನು ಸಾರ್ವಜನಿಕ ಪ್ರಾಧಿಕಾರದ ಮುಖ್ಯಸ್ಥರಿಗೆ ನಿಯತಕಾಲಿಕ ವರದಿಯನ್ನು ಕಳುಹಿಸತಕ್ಕದ್ದು. 7 ಪ್ರಕರಣದಿಂದ ಹೆಚ್ಚು ವಿಳಂಬ/ವಿಫಲತೆಯನ್ನು ಹೊಂದಿರತಕ್ಕಂಥ ಸರ್ಕಾರಿ ನೌಕರರಿಗೆ ನಮೂನೆ ಉ–4 ರಂತೆ ಇ–ಮೇಲ್ ಮೂಲಕ ಕಾರಣ ಕೇಳುವ ನೋಟೀಸ್ ನೀಡತಕ್ಕದ್ದು. ಕಾರಣಗಳು ಸಮರ್ಪಕವಾಗದೆ ಇರುವ ಸಂದರ್ಭದಲ್ಲಿ ಶಿಸ್ತಿನ ಕ್ರಮ ಜರುಗಿಸುವುದು.

ಸಕ್ಷಮ ಅಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರ ತನ್ನ ಸಮಯ ಮಿತಿಯನ್ನು ಮೀರಿದ್ದರೆ, ನಮೂನೆ ಉ–5 ರಂತೆ ಇ–ಮೇಲ್ ಮೂಲಕ ಕಾರಣ ಕೇಳುವ ನೋಟೀಸ್ ನೀಡತಕ್ಕದ್ದು. ಇಂಥ ಪ್ರಕರಣಗಳನ್ನು ತಿಂಗಳ ಅಂತ್ಯಕ್ಕೆ ನಮೂನೆ ಉ–6ರಲ್ಲಿ ಸಿ.ಆ.ಸು.ಇಲಾಖೆಗೆ ವರದಿ ಮಾಡತಕ್ಕದ್ದು. ಸಾರ್ವಜನಿಕ ಪ್ರಾಧಿಕಾರದ ಮುಖ್ಯಸ್ಥರು ಈ ಕ್ರಮವನ್ನು ತನ್ನ ವಾರ್ಷಿಕ ವರದಿಯಲ್ಲಿ ಸೇರಿಸತಕ್ಕದ್ದು. ವರ್ಷ ಅಂತ್ಯಕ್ಕೆ ಯಾವುದೇ ವಿಫಲರಾಗದೇ ಇರುವ ಅಧಿಕಾರಿಯ ಪಟ್ಟಿಯನ್ನು ಪ್ರಕಟಿಸಿ, ಶ್ಲಾಘನೆಪತ್ರ ನೀಡತಕ್ಕದ್ದು. (ನಮೂನೆ ಉ–7).

**17. ಪ್ರಸಾರ ಮತ್ತು ತರಬೇತಿ:–** ರಾಜ್ಯ ಸರ್ಕಾರ ಹಾಗೂ ಸಾರ್ವಜನಿಕ ಪ್ರಾಧಿಕಾರಗಳು,

(1) ಈ ಅಧಿನಿಯಮದಡಿಯಲ್ಲಿ ಉದ್ದೇಶಿಸಲಾದ ಹಕ್ಕುಗಳನ್ನು ಹೇಗೆ ಚಲಾಯಿಸಬೇಕೆಂಬುದರ ಬಗ್ಗೆ, ಸಾರ್ವಜನಿಕರಿಗೆ ನಿರ್ದಿಷ್ಟವಾಗಿ ಅವಕಾಶವಂಚಿತ ಸಮುದಾಯಗಳಿಗೆ ಹೆಚ್ಚಿನ ಅರಿವನ್ನು ಮೂಡಿಸಲು ಶಿಬಿರಗಳನ್ನು ಮತ್ತು ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಸಂಘಟಿಸುವುದು;

(2) ಈ ಅಧಿನಿಯಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಅವಶ್ಯವಿರುವ ಸಿಬ್ಬಂದಿ ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸತಕ್ಕದ್ದು.

(3) ಅಧಿಸೂಚಿತ ಸೇವೆಗಳು ಮತ್ತು ಅರ್ಜಿಗಳ ವಿಲೆ ವಿಧಾನಗಳ ಬಗ್ಗೆ ಸಾರ್ವಜನಿಕ ಪ್ರಾಧಿಕಾರಗಳಿಂದ ಸಕಾಲಿಕ ಹಾಗೂ ನಿಖರ ಮಾಹಿತಿಯನ್ನು ಪರಿಣಾಮಕಾರಿಯಾಗಿ ನಾಗರೀಕರಿಗೆ ನೀಡುವುದು.

(4) ಈ ಅಧಿನಿಯಮದಡಿಯಲ್ಲಿ ಹೆಸರಿಸಲಾದ ಅಧಿಕಾರಿ, ಸಕ್ಷಮ ಅಧಿಕಾರಿ ಮತ್ತು ಸಂದರ್ಭಾನುಸಾರ, ಮೇಲ್ಮನವಿ ಪ್ರಾಧಿಕಾರಗಳನ್ನು ಅವರುಗಳ ಕರ್ತವ್ಯಗಳ ಬಗ್ಗೆ ತರಬೇತಿ ನೀಡುವುದು ಹಾಗೂ ಕೈಪಿಡಿ ಹೊರಡಿಸುವುದು.

(5) ರಾಜ್ಯ ಸರ್ಕಾರದ ಸಂಬಂಧಪಟ್ಟ ಇಲಾಖೆಗಳು ಈ ಅಧಿನಿಯಮದಡಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಹಕ್ಕನ್ನು ಚಲಾಯಿಸಲು ಬಯಸುವಂಥ ವ್ಯಕ್ತಿಗೆ ಯುಕ್ತವಾಗಿ ಅಗತ್ಯವಾಗಬಹುದಾದಂಥ ಮತ್ತು ಸುಲಭವಾಗಿ ಒಟ್ಟುಗೂಡಿಸಿರಬಹುದಾದಂಥ ಮಾಹಿತಿ ಹಾಗೂ ವಿಧಾನಗಳನ್ನು ಒಳಗೊಂಡ ಮಾರ್ಗಸೂಚಿಗಳನ್ನು ರಚಿಸುವುದು.

(6) ರಾಜ್ಯ ಸರ್ಕಾರದ ಸಂಬಂಧಪಟ್ಟ ಇಲಾಖೆಗಳು, ಅವಶ್ಯಕವಾದಲ್ಲಿ, ಈ ಮುಂದಿನವುಗಳನ್ನು ಎಂದರೆ:–

(i) ಈ ಅಧಿನಿಯಮದ ಉದ್ದೇಶಗಳು;

(ii) ಹೆಸರಿಸಲಾದ ಅಧಿಕಾರಿ ಅಥವಾ ಸಕ್ಷಮ ಅಧಿಕಾರಿಗೆ ಸಲ್ಲಿಸತಕ್ಕಂಥ ಸೇವೆಗಳಿಗೆ ಸಂಬಂಧಿಸಿದ ಕೋರಿಕೆಯ ನಮೂನೆ ಮತ್ತು ವಿಧಾನ;

(iii) ಮೇಲ್ಮನವಿಗಳನ್ನು ದಾಖಲಿಸುವ ರೀತಿಯನ್ನು ಒಳಗೊಂಡಂತೆ ಸೇವೆಗಳ ವಿಳಂಬ ಅಥವಾ ತಿರಸ್ಕರಿಸುವುದಕ್ಕೆ ಸಂಬಂಧಿಸಿದಂತೆ ಕಾನೂನಿನಲ್ಲಿ ಲಭ್ಯವಿರುವ ಎಲ್ಲಾ ಪರಿಹಾರಗಳು;

(iv) ಈ ಅಧಿನಿಯಮಕ್ಕೆ ಅನುಸಾರವಾಗಿ ಸೇವೆಗಳನ್ನು ಪಡೆಯುವ ಸಂಬಂಧದಲ್ಲಿ ರಚಿಸಲಾದ ಅಥವಾ ಹೊರಡಿಸಲಾದ ಯಾವುವೇ ಹೆಚ್ಚುವರಿ ವಿನಿಯಮಗಳು ಅಥವಾ ಸುತ್ತೋಲೆಗಳು;

–ಇವುಗಳನ್ನು ಒಳಗೊಳ್ಳತಕ್ಕಂಥ, ನಿರ್ದಿಷ್ಟವಾಗಿ ಮತ್ತು ಮೇಲಿನ ಉಪನಿಯಮ (5)ರ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ನಿಯತಮಧ್ಯಂತರಗಳಲ್ಲಿ ಮೇಲಿನ (5)ನೇ ಉಪನಿಯಮದ ಅಡಿಯಲ್ಲಿ ಉಲ್ಲೇಖಿಸಿದ ಮಾರ್ಗಸೂಚಿಗಳನ್ನು ಇಂದೀಕರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.

**18. ಅನುಷ್ಠಾನದ ಮೇಲ್ವಿಚಾರಣೆ:–** ರಾಜ್ಯ ಸರ್ಕಾರವು, ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ ಬಳಕೆಯ ಮೂಲಕ, ಅಧಿಸೂಚಿತ ಸೇವೆಗಳ ಸಕಾಲಿಕ ವಿಲೆಯ ಕೇಂದ್ರೀಕೃತ ಮೇಲ್ವಿಚಾರಣೆಗಾಗಿ ಹಾಗೂ ಈ ಅಧಿನಿಯಮ ವಿವಿಧ ಉಪಬಂಧಗಳ ಮೇಲ್ವಿಚಾರಣೆಗಾಗಿ ಒಂದು ವ್ಯವಸ್ಥೆಯನ್ನು ಪರಿಚಯಿಸತಕ್ಕದ್ದು.

**ನಮೂನೆ – ಆ**

(ನಿಯಮ 4(1)ನ್ನು ನೋಡಿ)

**ಹೆಸರಿಸಲಾದ ಅಧಿಕಾರಿ/ಪ್ರಾಧಿಕೃತ ಅಧಿಕಾರಿಯಿಂದ ಸ್ವೀಕೃತ ಪತ್ರ**

| | | |
|---|---|---|
| 1 | ಅರ್ಜಿದಾರನ ಹೆಸರು ಮತ್ತು ವಿಳಾಸ | |
| 2 | ಅರ್ಜಿಯ ದಿನಾಂಕ | |
| 3 | ಅರ್ಜಿಯ ಸ್ವೀಕೃತ ಸಂಖ್ಯೆ | |
| 4 | ಹೆಸರಿಸಲಾದ ಅಧಿಕಾರಿಯ ಹೆಸರು ಹಾಗೂ ಅವರ ಪದನಾಮ ಮತ್ತು ವಿಳಾಸ | |
| 5 | ಕೋರಿದ ಸೇವೆಗಳ ವಿವರ | |
| 6 | ಅರ್ಜಿಯೊಡನೆ ಲಗತ್ತಿಸಿದ ಸಂಬಂಧಿಸಿದ ದಾಖಲೆಗಳ ವಿವರ | |
| 7 | ಒದಗಿಸುವುದು (ಹೌದು/ಇಲ್ಲ) | |
| 8 | ಸೇವೆ ಒದಗಿಸುವ ದಿನಾಂಕ | |
| 9 | ತಿರಸ್ಕಾರ (ಕಾರಣಗಳೊಂದಿಗೆ) | |

ಸ್ಥಳ: ಹೆಸರಿಸಲಾದ ಅಧಿಕಾರಿ/
ದಿನಾಂಕ: ಪ್ರಾಧಿಕೃತ ಅಧಿಕಾರಿಯ ಸಹಿ

**ನಮೂನೆ – ಇ**

**ಪರಿಹಾರ ವೆಚ್ಚದ ವಸೂಲಿಗೆ ನೋಟೀಸ್ ನೀಡುವ ನಮೂನೆ**

**(ಸಕ್ಷಮ ಅಧಿಕಾರಿಯಿಂದ)**

ನೀವು ಅಂಗೀಕಾರದ ರಸೀದಿಯ ಸಂಖ್ಯೆಯ–––––––––––ಮೂಲಕ ಅರ್ಜಿದಾರರಾದ ಶ್ರೀ–––––––––––––––––––––ರವರಿಂದ ಸ್ವೀಕರಿಸಿದ ಅರ್ಜಿ/ಅರ್ಜಿಗಳನ್ನು ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ರ ಅಡಿಯಲ್ಲಿ ನಿಗದಿಪಡಿಸಿದ ಸೇವೆಯನ್ನು ಕಾಲಮಿತಿಯೊಳಗೆ ನೀಡಲು ವಿಫಲರಾಗಿರುತ್ತೀರಿ/ವಿಳಂಬ ಮಾಡಿರುತ್ತೀರಿ. ಇದರಿಂದಾಗಿ ಅರ್ಜಿದಾರರಿಗೆ–––––––ದಿನಗಳ/ವಿಳಂಬ/ವಿಫಲತೆಗೆ ದಿನವೊಂದಕ್ಕೆ ರೂ.20/–ರಂತೆ ಪರಿಹಾರ ಶುಲ್ಕವಾಗಿ ಪಾವತಿಸಲಾಗಿರುತ್ತದೆ. ಈಗಾಗಲೇ ದಿನಾಂಕ:––––––––––ರಂದು ಸದರಿ ಅರ್ಜಿದಾರರಿಗೆ ಅಧಿನಿಯಮದ 11(1) ರಂತೆ ರೂ.–––––––––––ಅನ್ನು ಪಾವತಿಸಲಾಗಿದೆ. ಈ ಪರಿಹಾರ ವೆಚ್ಚವಾದ ರೂ.––––––/– ಗಳನ್ನು ತಮ್ಮ ಆಯಾ ತಿಂಗಳ ವೇತನದಿಂದ ವಸೂಲಿ ಮಾಡಲಾಗುವುದು. ಈ ಬಗ್ಗೆ ನಿಮ್ಮ ಸ್ಪಷ್ಟ ವಿವರಣೆಯನ್ನು 7 ದಿನಗಳೊಳಗಾಗಿ ನೀಡಲು ಸೂಚಿಸಿದೆ.

ಈ ಬಗ್ಗೆ ಇನ್ನು ಮುಂದೆ ಈ ರೀತಿಯ ವಿಫಲತೆ/ವಿಳಂಬಕ್ಕೆ ಕಾರಣ ನೀಡದೆ ಸೇವೆಯನ್ನು ಸಕಾಲದಲ್ಲಿ ಒದಗಿಸತಕ್ಕದ್ದು.

ದಿನಾಂಕ:

ಸ್ಥಳ: ಸಕ್ಷಮ ಅಧಿಕಾರಿಯ ಸಹಿ

**ನಮೂನೆ – ಈ**

**ಮೇಲ್ಮನವಿ ಆದೇಶದ ನಮೂನೆ**

**(ಸಕ್ಷಮ ಅಧಿಕಾರಿ/ಮೇಲ್ಮನವಿ ಪ್ರಾಧಿಕಾರ)**

ದಿನಾಂಕ:–––––––––––––––––ರಂದು ಸ್ವೀಕೃತ ರಸೀದಿ ಸಂಖ್ಯೆ––––––––– ಹೊಂದಿರುವ ಅರ್ಜಿದಾರರು ಕೇಳಿರುವ ಅನುಸೂಚಿತ ಸೇವೆಗಳಲ್ಲಿ ವಿಳಂಬ/ವಿಫಲತೆಯನ್ನು ದೃಢೀಕರಿಸಿರುವುದರಿಂದ ಅರ್ಜಿದಾರರಿಗೆ ರೂ.–––––––––––––ಗಳ ಪರಿಹಾರ/ಶುಲ್ಕವನ್ನು ಪಾವತಿಸಲಾಗಿರುತ್ತದೆ. ಈ ಬಗ್ಗೆ ಹೆಸರಿಸಲಾದ ಅಧಿಕಾರಿಯಿಂದ ಸ್ಪಷ್ಟವಾದ ವಿವರಣೆಯನ್ನು ಏಳು ದಿನಗಳೊಳಗಾಗಿ ಕೇಳಲಾಗಿತ್ತು. ಈ ಬಗ್ಗೆ ಹೆಸರಿಸಲಾದ ಅಧಿಕಾರಿ ಹಾಗೂ ಅರ್ಜಿದಾರರ ಅಹವಾಲುಗಳನ್ನು ವಿಚಾರಣೆ ಮಾಡಲಾಗಿದೆ. ವಿಚಾರಣೆ ಸಮಯದಲ್ಲಿ ಅಹವಾಲುಗಳನ್ನು/ಸಂಬಂಧಿಸಿದ ದಾಸ್ತಾವೇಜುಗಳನ್ನು ಹಾಗೂ ಇನ್ನಿತರ ಮಾಹಿತಿಗಳನ್ನು ಆಧರಿಸಿ, ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ 2011 ರ ನಿಯಮ (9) ರಂತೆ ಶ್ರೀ–––––––––––––––––––ರವರು ಸದರಿ––––––––––––ಸೇವೆಗಳನ್ನು ಒದಗಿಸಲು ವಿಫಲವಾಗಿರುತ್ತಾರೆ/ ವಿಳಂಬ ಮಾಡಿರುತ್ತಾರೆಂದು ದೃಢಪಟ್ಟಿರುತ್ತದೆ. ಆದುದರಿಂದ ಅವರ ಮುಂಬರುವ ವೇತನದಿಂದ ರೂ.–––––––––––ಗಳನ್ನು ಕಡಿತಗೊಳಿಸಿ, ಇಲಾಖೆಗೆ ಸಂಬಂಧಪಟ್ಟ ಲೆಕ್ಕಶೀರ್ಷಿಕೆಯಡಿ ಜಮಾ ಮಾಡಲು ವೇತನ ಬಟವಾಡೆ ಅಧಿಕಾರಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ದಿನಾಂಕ: ಸಹಿ/–
ಸ್ಥಳ: ಸಕ್ಷಮ ಅಧಿಕಾರಿ/ಮೇಲ್ಮನವಿ ಪ್ರಾಧಿಕಾರ

